ಶ್ರೀ ಪಿಳ್ಳೈಲೋಕಾಚಾರ್ಯರು ರಚಿಸಿರುವ

# ಮುಮುಕ್ಷುಪ್ಪಡಿ

(ತಿರುಮಂತ್ರ, ದ್ವಯ, ಚರಮಶ್ಲೋಕಗಳ ಸೂತ್ರಗಳೂ
ಮತ್ತು ಸೂತ್ರಗಳಿಗೆ ಶ್ರೀಮಣವಾಳ ಮಾಮುನಿಗಳ
ವ್ಯಾಖ್ಯಾನದ ಪ್ರಕಾರ ಸರಳಾರ್ಥ.)

ಪ್ರಕಾಶಕರು:

**ಡಾ. ಎಂ. ಡಿ. ಶ್ರೀನಿವಾಸ**

ಫ್ಲಾಟ್ 1, ನಂ. 31, ರುಕ್ಮಿಣೀ ರೋಡು
ಬೆಸೆಂಟ್‌ನಗರ, ಮದ್ರಾಸ್-600 090.

1992

ಪ್ರಥಮ ಮುದ್ರಣ—1000 ಪ್ರತಿಗಳು

ಬೆಲೆ: ಐದು ರೂಪಾಯಿ

ಅನುವಾದಕರು:

ಶ್ರೀಮತಿ ಎಂ. ಡಿ. ವೇದವಲ್ಲಿ

ಮುದ್ರಕರು:

ಪಾವನೀ ಮುದ್ರಣ

ನಂ. 462, 80 ಅಡಿ ರಸ್ತೆ, ಜೆ. ಪಿ. ನಗರ 1ನೇ ಹಂತ,

ಬೆಂಗಳೂರು–560 078

ಪುಸ್ತಕ ದೊರೆಯುವ ಸ್ಥಳ:

ಶ್ರೀಮತಿ ಎಂ. ಎ. ಸಿಂಗಮ್ಮ

ನಂ. 140/ಎ, 13ನೇ ಮೈನ್, 3ನೇ ಬ್ಲಾಕ್ ಈಸ್ಟ್

ಜಯನಗರ, ಬೆಂಗಳೂ-560 011

ಫೋನ್: 632946

ಶ್ರೀ ಎಂ. ಡಿ. ರಂಗನಾಥ

ನಂ. 966 (43), 65ನೇ ಕ್ರಾಸ್

5ನೇ ಬ್ಲಾಕ್, ರಾಜಾಜಿನಗರ

ಬೆಂಗಳೂರು–560 010.

ಫೋನ್: 358726

ಶ್ರೀ ಎಂ. ಡಿ. ಜಯಸಿಂಹ

ನಂ. 40/10, 13ನೇ ಕ್ರಾಸ್

6ನೇ ಮೈನ್ ಹತ್ತಿರ, ಮಲ್ಲೇಶ್ವರ,

ಬೆಂಗಳೂರು–560 003.

1992

# ಉಪೋದ್ಘಾತ

ಪರಮಪೂಜ್ಯರಾದ ಶ್ರೀ ಪಿಳ್ಳೈಲೋಕಾಚಾರ್ಯರು ರಚಿಸಿರುವ ಅಷ್ಟಾದಶ ರಹಸ್ಯವೆಂಬುದು ಬಹಳ ಆದರಣೀಯವಾದ ಗ್ರಂಥವಾಗಿದೆ, ಅದರಲ್ಲಿ 18 ರಹಸ್ಯಗಳಿವೆ. ಅವುಗಳಲ್ಲಿ ಮುಮುಕ್ಷುಪ್ಪಡಿ ಎಂಬುದೇ ಮೊದಲನೆಯ ರಹಸ್ಯ. ಇದರಲ್ಲಿ ತಿರುಮಂತ್ರ, ದ್ವಯ ಮತ್ತು ಚರಮಶ್ಲೋಕವೆಂಬ ಮೂರು ಪ್ರಕರಣಗಳಿವೆ. ಇವುಗಳೆಲ್ಲವೂ ಸೂತ್ರರೂಪದಲ್ಲಿವೆ. ಈ ಸೂತ್ರಗಳಿಗೆಲ್ಲಾ ಅರ್ಥ ವಿಶೇಷಾರ್ಥಗಳನ್ನು ಶ್ರೀ ಮಣವಾಳಮಾಮುನಿಗಳವರು ವಿವರವಾಗಿ ರಚಿಸಿ ಅನುಗ್ರಹಿಸಿದ್ದಾರೆ. ತಿರುಮಂತ್ರವು ಅಂದರೆ 'ಓಂ ನಮೋ ನಾರಾಯಣಾಯ' ಎಂಬ ಅಷ್ಟಾಕ್ಷರ ಮಂತ್ರವೂ, ಮಂತ್ರರತ್ನವು ಅಂದರೆ 'ಶ್ರೀಮನ್ನಾರಾಯಣ ಚರಣೌ ಶರಣಂ ಪ್ರಪದ್ಯೆ' ಎಂಬ ದ್ವಯ ಮಂತ್ರವೂ ವೇದದಲ್ಲಿ ಪ್ರತಿಪಾದಿಸಲ್ಪಟ್ಟಿರುವ ಉಪದೇಶಗಳ ಸಾರಸಂಗ್ರಹವಾದ ಮಂತ್ರಗಳಾಗಿವೆ. ಚರಮಶ್ಲೋಕವು ಅಂದರೆ "ಸರ್ವಧರ್ಮಾನ್ ಪರಿತ್ಯಜ್ಯ ಮಾಂ ಏಕಂ ಶರಣಂ ವ್ರಜ" ಎಂಬ ಶ್ಲೋಕವು ಭಗವದ್ಗೀತೆಯ 18ನೆಯ ಅಧ್ಯಾಯದಲ್ಲಿ ಉಪದೇಶಿಸಿರುವ ಚರಮ ಉಪಾಯವಾಗಿದೆ. ತಿರುಮಂತ್ರವನ್ನು ಬದರಿಕಾಶ್ರಮದಲ್ಲಿ ನಾರಾಯಣನು ತಾನೇ ಆಚಾರ್ಯನಾಗಿ ನಿಂತು ಸ್ವಾಂಶಭೂತನಾದ ನರನಿಗೆ ಉಪದೇಶ ಮಾಡಿದ್ದಾನೆಂದೂ; ದ್ವಯಮಂತ್ರವನ್ನು ಶ್ರೀಮನ್ನಾರಾಯಣನು ವಿಷ್ಣು ಲೋಕದಲ್ಲಿ ಶ್ರೀದೇವಿಗೆ ಉಪದೇಶಿಸಿದ್ದಾನೆಂದೂ; ಚರಮಶ್ಲೋಕವನ್ನು ಶ್ರೀಕೃಷ್ಣಪರಮಾತ್ಮನು ಕುರುಕ್ಷೇತ್ರ ರಣರಂಗದಲ್ಲಿ ಅರ್ಜುನನಿಗೆ ಉಪದೇಶ ಮಾಡಿದನೆಂದೂ ತಿಳಿಸಿದ್ದಾರೆ. ಈ ಮೂರು ರಹಸ್ಯಗಳನ್ನೂ ಪರಮಾತ್ಮನೇ ಉಪದೇಶ ಮಾಡಿರುವುದರಿಂದ ಇವುಗಳು ಅವಶ್ಯವಾಗಿ ಅರಿಯಬೇಕಾದ ಮಂತ್ರಗಳಾಗಿವೆ.

ಈ ರಹಸ್ಯತ್ರಯಗಳಲ್ಲಿ ಚೇತನರು ಅರಿತು ಆಚರಿಸಬೇಕಾದ ತತ್ತ್ವಹಿತ ಪುರುಷಾರ್ಥಗಳೆಲ್ಲವೂ ವಿವರವಾಗಿ ತಿಳಿಸಲ್ಪಟ್ಟಿವೆ. ತಿರುಮಂತ್ರಕ್ಕೆ ದ್ವಯಮಂತ್ರವೂ, ದ್ವಯ ಮಂತ್ರಕ್ಕೆ ಚರಮಶ್ಲೋಕವೂ ವಿವರಣೆಯಾಗಿದೆ. ಅಲ್ಲದೆ ತಿರುಮಂತ್ರವು ತತ್ತ್ವವನ್ನೂ, ದ್ವಯಮಂತ್ರವು ಪುರುಷಾರ್ಥವನ್ನೂ, ಚರಮಶ್ಲೋಕವು ಉಪಾಯವನ್ನೂ ಪ್ರಧಾನವಾಗಿ ವಿವರಿಸುತ್ತವೆ. ತಿರುಮಂತ್ರದಲ್ಲಿ ಭಗವಂತನೇ ಚೇತನರಿಗೆಲ್ಲಾ ಶೇಷಿಯಾಗಿ (ಸ್ವಾಮಿಯಾಗಿ) ರಕ್ಷಕನಾಗಿ ಇದ್ದಾನೆ; ಚೇತನರು ಅವನಿಗೇ ಶೇಷಭೂತರಾಗಿ (ದಾಸರಾಗಿ) ಇದ್ದಾರೆ ಎಂಬ ಭಗವದನನ್ಯಾರ್ಹಶೇಷತ್ವವೂ ಮತ್ತು ಭಗವದತ್ಯಂತಪಾರತಂತ್ರ್ಯವೂ; ಭಗವಂತನೇ ಚೇತನರಿಗೆಲ್ಲಾ ರಕ್ಷಕನು ಮತ್ತು ಅವನಲ್ಲಿ ಶರಣಾಗತಿಯೇ ಉಪಾಯವು ಎಂಬ ಭಗವದನನ್ಯ ಶರಣ್ಯತ್ವವೂ; ಮತ್ತು

ಸ್ವಾಮಿಯಾದ ಪರಮಾತ್ಮನಿಗೆ ಸರ್ವದಾ ಸಕಲವಿಧ ಕೈಂಕರ್ಯಗಳನ್ನು ಪ್ರೀತಿಯಿಂದ ಮಾಡುವುದೇ ದಾಸನಾದ ಚೇತನನಿಗೆ ಕರ್ತವ್ಯವು ಮತ್ತು ಪರಮಪುರುಷಾರ್ಥವು ಎಂಬ ತತ್ವವೂ ಪ್ರತಿಪಾದಿಸಲ್ಪಟ್ಟಿದೆ. ಈ ತತ್ವವನ್ನು ಅರಿತಮೇಲೆ ಚೇತನನು ಆಚರಿಸಬೇಕಾದ ಉಪಾಯವು ಭಗವಂತನಲ್ಲೀ ಶರಣಾಗತಿಯು ಎಂದು ಚರಮ ಶ್ಲೋಕದಲ್ಲಿ ಸ್ಪಷ್ಟವಾಗಿ ವಿಧಿಸಲ್ಪಟ್ಟಿದೆ. ಈ ಶರಣಾಗತಿ ಉಪಾಯವನ್ನು ಅನು ಷ್ಠಾನ ರೂಪಕ್ಕೆ ತಂದು ಆಚರಿಸುವ ರೀತಿಯನ್ನೂ ಮತ್ತು ಪರಮಪುರುಷಾರ್ಥ ವಾದ ಪರಮಾತ್ಮನ ನಿತ್ಯ ಕೈಂಕರ್ಯಪ್ರಾಪ್ತಿಗಾಗಿ ಪ್ರಾರ್ಥನೆಯನ್ನೂ ದ್ವಯ ಮಂತ್ರವು ವಿವರಿಸುವುದರಿಂದ ಅದು ಅನುಷ್ಠಾನ ಪರವಾದ ಮಂತ್ರವಾಗಿದೆ. ಹೀಗೆ ಈ ಮೂರು ರಹಸ್ಯಗಳೂ ತತ್ವಹಿತ ಪುರುಷಾರ್ಥಗಳನ್ನು ವಿವರಿಸುವುದರಿಂದ ಇವು ಗಳ ಅರ್ಥವನ್ನು ಚೇತನರು ಅವಶ್ಯವಾಗಿ ಅರಿಯಬೇಕು ಮತ್ತು ದ್ವಯಮಂತ್ರಾನು ಸಂಧಾನವು ಸರ್ವದಾ ಮಾನಸಿಕವಾಗಿ ನಡೆಯುತ್ತಿರಬೇಕು ಎಂದು ನಮ್ಮ ಪೂರ್ವಾ ಚಾರ್ಯರುಗಳು ಉಪದೇಶಿಸಿದ್ದಾರೆ.

ಆದರೆ ಈ ರಹಸ್ಯಗಳೆಲ್ಲವೂ ತಮಿಳು ಭಾಷೆಯಲ್ಲಿರುವುದರಿಂದ, ಅದರಲ್ಲಿ ಹೆಚ್ಚು ಪರಿಶ್ರಮವಿಲ್ಲದವರಿಗೂ ಅನುಕೂಲವಾಗಲೆಂದು, ಶ್ರೀಯುತರಾದ ಪರಮಪದಿಸಿದ ಮಂಡಯಂ ಅಣ್ಣಾಥೊರೆ ಶ್ರೀರಾಮ (ಎಂ.ಎ. ಶ್ರೀರಾಮ) ರಿಟೈರ್ಡ್ ಡೈರೆಕ್ಟರ್, ಗೌರ್ನಮೆಂಟ್ ಪ್ರೆಸ್ ಇವರ ಪ್ರೋತ್ಸಾಹದಿಂದ ನಾನು ಮತ್ತು ನನ್ನ ಅಕ್ಕ ಶ್ರೀಮತಿ ಎಂ. ಎ. ಸಿಂಗಮ್ಮ ಈ ಸೂತ್ರಗಳಿಗೆಲ್ಲಾ ಶ್ರೀಮಣವಾಳಮಾಮುನಿಗಳ ವ್ಯಾಖ್ಯಾನವನ್ನನುಸರಿಸಿ ಕನ್ನಡದಲ್ಲಿ ಸರಳವಾಗಿ ಅರ್ಥ ತಾತ್ಪರ್ಯಗಳನ್ನು ಬರೆಯುವ ಪ್ರಯತ್ನ ಮಾಡಿದ್ದೇವೆ. ಇಂತಹ ಮಹದ್ಗ್ರಂಥಗಳಿಗೆ ಅರ್ಥ ಬರೆಯಲು ನಾನು ಶಕ್ತಳಾಗಿಲ್ಲದಿದ್ದರೂ, ನಮ್ಮ ಅಜ್ಜಿ ಮಾತೃಶ್ರೀ ಕಂಚಿ ವೇದಮ್ಮನವರ ಹತ್ತಿರ ವ್ಯಾಸಂಗ ಮಾಡಿ ನಾನು ತಿಳಿದುಕೊಂಡಿದ್ದನ್ನು ಇದು ಒಂದು ಭಗವತ್ ಕೈಂಕರ್ಯ ವೆಂದು ಭಾವಿಸಿ ಆದಷ್ಟು ಸರಳವಾಗಿ ಬರೆಯಲು ಪ್ರಯತ್ನಿಸಿದ್ದೇನೆ. ಪರಮಪದಿಸಿದ ಶ್ರೀ ತಿರುವಾಯ್ಮೊಳಿರಾಮಾನುಜೈಯ್ಯಂಗಾರ್ ಸ್ವಾಮಿಗಳ, ಶ್ರೀ ಆಳ್ವಾರ್ ತಿರುಮಲೈಯ್ಯಂಗಾರ್ ಸ್ವಾಮಿಗಳ ಮತ್ತು ಶ್ರೀ ವೇಲಂಕುಡಿ ವರದಾಚಾರ್ ಸ್ವಾಮಿಗಳ ಕಾಲಕ್ಷೇಪಗಳನ್ನು ಕೇಳಿ ತಿಳಿದುಕೊಳ್ಳುವ ಸುಯೋಗವು ನನಗೆ ಲಭಿಸಿತು. ಅವರಿಂದ ನಾನು ಅರಿತ ವಿಶೇಷಾರ್ಥಗಳನ್ನು ಸ್ವಲ್ಪ ಮಟ್ಟಿಗೆ ಸಂಗ್ರಹವಾಗಿ ತಿಳಿಸುವ ಪ್ರಯತ್ನ ಮಾಡಿದ್ದೇನೆ.

ಇದಕ್ಕೆ ಮುನ್ನುಡಿ ಬರೆದುಕೊಟ್ಟಿರುವ ಶ್ರೀ ಉ. ಎಂ.ಎ.ಲಕ್ಷ್ಮೀತಾತಾಚಾರ್ (ಡೈರೆಕ್ಟರ್, ಅಕಾಡಮಿ ಆಫ್ ಸಂಸ್ಕೃತ ರಿಸರ್ಚ್, ಮೇಲುಕೋಟೆ) ಸ್ವಾಮಿಗಳ ವರಿಗೆ ನನ್ನ ಅನಂತ ವಂದನೆಗಳು. ತಿರುವಲ್ಲಿಕ್ಕೇಣಿ ಶ್ರೀ ಪಾರ್ಥಸಾರಥಿ ದೇವರ ಛಾಯಾ ಪ್ರತಿಯನ್ನು ನಮಗೆ ಅಚ್ಚು ಮಾಡಿಸಿಕೊಟ್ಟಿದ್ದಕ್ಕೆ ಶ್ರೀ ಎಂ. ಎ.



ವೆಂಕಟಕೃಷ್ಣ, (ಸಂಪಾದಕರು ಗೀತಾಚಾರ್ಯನ್) ರವರಿಗೂ, ಸಕಾಲಕ್ಕೆ ಅಂದವಾಗಿ ಅಚ್ಚು ಹಾಕಿಸಿಕೊಟ್ಟು ಸಹಾಯ ಮಾಡಿದ ಪಾವನೀ ಮುದ್ರಣಾಲಯದವರಿಗೂ ಮತ್ತು ಇದರ ಕರಡು ಪ್ರತಿಗಳನ್ನು ತಿದ್ದಿ ಸರಿಪಡಿಸಿ ಸಹಾಯ ಮಾಡಿದ ಶ್ರೀ ಆರ್. ವೆಂಕಟರಾಮಯ್ಯನವರಿಗೂ ಮತ್ತು ಈ ಕೃತಿ ಹೊರಬರಲು ಸಹಕರಿಸಿದ ಶ್ರೀ ಸತ್ಯನಾರಾಯಣ ಮತ್ತು ಶ್ರೀ ಪ್ರಕಾಶ್ ಸಹೋದರರಿಗೂ ನನ್ನ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ಇದನ್ನು ರಚಿಸಲು ನನಗೆ ಪ್ರೋತ್ಸಾಹ ನೀಡಿದ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಅಧಿಕಾರಿಗಳಾಗಿದ್ದ ಮತ್ತು ಮಂಡಯಂ ಶ್ರೀ ವೈಷ್ಣವ ಸಭೆಗೂ, ಬೆಂಗಳೂರು ಮತ್ತು ಮದರಾಸು ಶ್ರೀ ಯದುಗಿರಿ ಯತಿರಾಜ ಮಠಗಳಿಗೂ ಸೇವೆ ಸಲ್ಲಿಸಿದ ನನ್ನ ಪತಿ ಶ್ರೀ ಎಂ. ಡಿ. ರಾಮಸ್ವಾಮಿ ಐಯ್ಯಂಗಾರ್‌ರವರ ಸ್ಮರಣಾರ್ಥವಾಗಿ ಇದನ್ನು ಪ್ರಕಟಿಸಿ, ಭಗವಂತನ ಪಾದಾರವಿಂದಗಳಿಗೆ ಈ ಗ್ರಂಥ ಪುಷ್ಪವನ್ನು ಸಮರ್ಪಿಸುತ್ತೇನೆ.

ಎಂ. ಡಿ. ವೇದವಲ್ಲಿ



# ಮುನ್ನುಡಿ

ಜ್ಞಾನ ಅನುಷ್ಠಾನಗಳ ಪರಿಪೂರ್ತಿ ಉಳ್ಳವರೇ ಆಚಾರ್ಯರಾಗಲು ಅರ್ಹರು. ಅಂತಹ ಆಚಾರ್ಯರಲ್ಲಿ ಅತ್ಯಂತ ಶ್ರೇಷ್ಠರಾದವರು ಲೋಕಾಚಾರ್ಯರು. ಸಂಸಾರ ದಲ್ಲಿದ್ದು ವಿರಕ್ತಿಯಿಂದ ಜೀವನವನ್ನು ನಡೆಸಿದವರಲ್ಲಿ ಇವರು ಅಗ್ರಗಣ್ಯರು. ಇವರು ಕಂಚಿಯ ವರದರಾಜನ ಅಪರಾವತಾರ ಎಂಬ ಪ್ರತೀತಿಯೂ ಇದೆ. ಅಷ್ಟಾದಶ ರಹಸ್ಯಗಳೆಂಬ ಶ್ರೇಷ್ಠ ಕೃತಿಗಳನ್ನು ಇವರು ರಚಿಸಿದ್ದಾರೆ. ಇವರ ಒಂದೊಂದು ಕೃತಿಯೂ ಜ್ಞಾನ ಅನುಭವಗಳ ಅಪೂರ್ವಸಂಗಮ.

ಇಂತಹ ಕೃತಿಗಳಲ್ಲಿ ಪರಮೋಪಾದೇಯವಾದ ಮೂರು ಕೃತಿಗಳು ಅತ್ಯಂತ ಪ್ರಧಾನವಾದವು. ಮುಮುಕ್ಷು ಆದವನು ತಿರುಮಂತ್ರ, ದ್ವಯ ಮತ್ತು ಚರಮ ಶ್ಲೋಕ ಎಂಬ ಈ ಮೂರು ಕೃತಿಗಳನ್ನು ಅವಶ್ಯವಾಗಿ ಅಧ್ಯಯನ ಮಾಡುವುದಲ್ಲದೆ ಅರ್ಥಸಹಿತ ಅನುಸಂಧಾನ ಮಾಡುವುದೂ ಅತ್ಯಾವಶ್ಯಕ. ತಿರುಮಂತ್ರ ಎಂಬ ಅಷ್ಟಾಕ್ಷರ ಮಹಾಮಂತ್ರವನ್ನು "ಮಂತ್ರರಾಜ" ಎಂದು ಕರೆಯುತ್ತಾರೆ. ಇದು ಕೇವಲ ಎಂಟು ಅಕ್ಷರಗಳಿಂದ ಕೂಡಿದ್ದರೂ ಸಕಲ ವೇದಸಾರವೂ ಇದರಲ್ಲಿ ಅಡಗಿದೆ. ಇದರಲ್ಲಿ ಮೂರು ಪದಗಳಿವೆ. ಇವುಗಳಲ್ಲಿ ಮೊದಲನೆಯ ಪದ "ಓಂಕಾರ" ಅಥವಾ "ಪ್ರಣವ" ಈ ಪದದ ಅರ್ಥವನ್ನೇ "ನಮೋ ನಾರಾಯಣಾಯ" ಎಂಬ ಪದಗಳಿಂದ ವಿವರಿಸಲಾಗಿದೆ. ಅಷ್ಟಾಕ್ಷರ ಮಹಾಮಂತ್ರದ ಅರ್ಥವನ್ನು ಸೂತ್ರ ರೀತಿಯಲ್ಲಿ ವಿವರಿಸಿರುವ ಕೃತಿ **ತಿರುಮಂತ್ರ ಪ್ರಕರಣ.**

ಅಷ್ಟಾಕ್ಷರ ಮಹಾಮಂತ್ರದ ವಿವರಣೆಯನ್ನು ನೀಡುವ ಮಂತ್ರ "ದ್ವಯ" ಮಂತ್ರ. ಇದನ್ನು ಶ್ರೀಮನ್ನಾರಾಯಣನು ಶ್ರೀದೇವಿಗೆ ಉಪದೇಶಿಸಿದುದಾಗಿ ತಿಳಿದು ಬರುತ್ತದೆ. ಇದು ಅಷ್ಟಾಕ್ಷರ ಮಹಾಮಂತ್ರದ ವಿವರಣೆಯೇ ಆಗಿದ್ದರೂ ಶರಣಾಗತಿತತ್ತ್ವವನ್ನು ಎತ್ತಿ ಸಾರುತ್ತದೆ. ಇದನ್ನು "ಮಂತ್ರರತ್ನ" ಎಂದು ಕರೆಯುತ್ತಾರೆ. ಪ್ರತಿಯೊಬ್ಬ ಶ್ರೀವೈಷ್ಣವನೂ ಸತತವಾಗಿ ಅನುಸಂಧಾನ ಮಾಡಬೇಕಾಗಿರುವ ಮಂತ್ರ ಇದು. ಮಣವಾಳಮಾಮುನಿಗಳ ದೈನಂದಿನ ಕಾರ್ಯಕ್ರಮಗಳನ್ನು ವರ್ಣಿಸುವ 'ದಿನಚರಿ' ಎಂಬ ಕೃತಿಯಲ್ಲಿ

"ಮಂತ್ರರತ್ನಾನುಸಂಧಾನ-ಸಂತತ-ಸ್ಫುರಿತಾಧರಮ್।

ತದರ್ಥ-ತತ್ತ್ವನಿಧ್ಯಾನಸನ್ನದ್ಧ ಪುಲಕೋದ್ಗಮಮ್॥"

ಎಂದು ಹೇಳಿದೆ. ಮಣವಾಳಮಾಮುನಿಗಳ ಅಧರವು ಸತತವೂ ಮಂತ್ರರತ್ನ

ಅನುಸಂಧಾನದಿಂದ ಸ್ಫುರಿಸುತ್ತಿತ್ತು. ಅದರ ಅರ್ಥವನ್ನು ವಿಶೇಷವಾಗಿ ಅನುಭವಿಸುತ್ತಿದ್ದುದರಿಂದ ಮೈ ರೋಮಾಂಚನಗೊಳ್ಳುತ್ತಿತ್ತು ಎಂಬುದು ಇದರ ತಾತ್ಪರ್ಯ. ಇದನ್ನು ಸೂತ್ರ ರೀತಿಯಲ್ಲಿ ವಿವರಿಸಿರುವ ಕೃತಿ "ದ್ವಯ" ಪ್ರಕರಣ.

ಅರ್ಜುನನಿಗೆ ಗೀತೋಪದೇಶ ಮಾಡುವ ಸಮಯದಲ್ಲಿ ಗೀತೆಯ ಸಾರಸರ್ವಸ್ವವಾದ ಚರಮಶ್ಲೋಕವನ್ನು ಅಂತಿಮವಾಗಿ ಉಪದೇಶಿಸಲಾಗಿದೆ. ಇದು ದ್ವಯಾರ್ಥವನ್ನು ಇನ್ನೂ ವಿಸ್ತಾರವಾಗಿ ಪ್ರತಿಪಾದಿಸುತ್ತದೆ. ಸಮಸ್ತ ಸಾಧ್ಯೋಪಾಯಗಳನ್ನೂ ಕೈಬಿಟ್ಟು ಸಿದ್ಧೋಪಾಯವಾದ ತನ್ನನ್ನೇ ಆಶ್ರಯಿಸಬೇಕೆಂಬ ವಿಷಯವನ್ನು ಕೃಷ್ಣ ಪರಮಾತ್ಮನು ಅತ್ಯಂತ ಸ್ಪಷ್ಟವಾಗಿ ಇಲ್ಲಿ ಉಪದ್ದೇಶಿಸಿದ್ದಾನೆ. ಇದರ ಸೂತ್ರಶೈಲಿಯಲ್ಲಿರುವ ವಿವರಣವೇ "ಚರಮಶ್ಲೋಕ" ಪ್ರಕರಣ. ಈ ಮೂರು ಕೃತಿಗಳೂ ಕೂಡ ಮಣಿಪ್ರವಾಳ ಭಾಷೆಯಲ್ಲಿ ರಚಿತವಾಗಿವೆ.

ಪ್ರತಿಯೊಬ್ಬ ಜೀವಾತ್ಮನೂ ಆ ಪರಮಾತ್ಮನ ಅವಿಭಾಜ್ಯ ಅಂಶ. ಜೀವಾತ್ಮನಿಗೆ ಚೈತನ್ಯವಿದ್ದು ಸ್ವಾತಂತ್ರ್ಯವಿದ್ದರೂ ಆ ಪರಮಾತ್ಮನಿಗಾಗಿಯೇ ತಾನಿರುವುದು ಎಂಬ ಭಾವನೆ ಬಂದಾಗ ತನ್ನ ಪ್ರಯೋಜನಕ್ಕೋಸ್ಕರ ಮಾಡಬೇಕಾದ ಕೃತ್ಯವಾವುದೂ ಇಲ್ಲ. ಅವನು ಮಾಡುವ ಸಮಸ್ತ ಕೃತ್ಯಗಳೂ ಪರಮಾತ್ಮ ಕೈಂಕರ್ಯದಲ್ಲಿ ಪರ್ಯವಸಾನಗೊಳ್ಳುತ್ತವೆ. ಭಗವನ್ಮುಖೋಲ್ಲಾಸವೇ ಆ ಜೀವಾತ್ಮನಿಗೆ ಪರಮೋದ್ದೇಶ. ಅವನು ಮಾಡುವ ಕರ್ಮಗಳಲ್ಲಾಗಲೀ, ಭಕ್ತಿಯಲ್ಲಾಗಲೀ ಸ್ವಾರ್ಥದ ಸೊಲ್ಲೂ ಇಲ್ಲ. ಆದ್ದರಿಂದ ಪರಮಾತ್ಮನೇ ತನಗೆ ಸರ್ವಸ್ವ. ಸರ್ವವಿಧ ಬಂಧು ; ಕರ್ಮ, ಜ್ಞಾನ, ಭಕ್ತಿ ಮೊದಲಾದ ಯಾವುದೇ ಸಾಧನಗಳೂ ಕೂಡ ಅವನ ಉಪಯೋಗಕ್ಕೆ ಬಾರವು. ಆದ್ದರಿಂದ ಪರಮಾತ್ಮನನ್ನೇ ಸಿದ್ಧೋಪಾಯವನ್ನಾಗಿ ಅಂಗೀಕರಿಸಿ ಅವನಲ್ಲಿ ಶರಣಾಗುವುದೇ ಅವನಿಗೆ ಸ್ವರೂಪ. ಪರಮಾತ್ಮನ ಕೃಪೆ ನಿರಂತರವಾದ ವರ್ಷಧಾರೆಯಂತೆ ಪಂಡಿತ ಪಾಮರ ಭೇದವಿಲ್ಲದೆ, ಚೇತನಾಚೇತನ ಭೇದವಿಲ್ಲದೆ, ಅರಸನಿಂದ ಆಳಿನವರೆಗೆ ಎಲ್ಲರ ಮೇಲೂ ಬೀಳುವುದು. ಪರಮಾತ್ಮನಿಗೂ ತಮಗೂ ಇರುವ ಸಂಬಂಧವನ್ನರಿತು ತಮ್ಮ ನಿಜಸ್ವರೂಪವನ್ನು ತಿಳಿದವರು ಆ ಕೃಪೆ ಬಂದಾಗ ನಿರಾಕರಿಸುವುದಿಲ್ಲ. ಅಭಿಮುಖ್ಯವನ್ನು ತೋರಿಸುತ್ತಾರೆ. ಅಂತಹವರಿಗೆ ಪರಮಾತ್ಮನು ತಾನೇ ಮುಕ್ತಿಯನ್ನು ಕೊಡುವನು. ಇದು ಶರಣಾಗತಿತತ್ವದ ಸಾರ.

ಈ ಸಾರವನ್ನು ಒಳಗೊಂಡ ಮುಮುಕ್ಷುಗಳಿಗೆ ಪರಮೋಪಾದೇಯವಾದ ತಿರುಮಂತ್ರ, ದ್ವಯ, ಚರಮಶ್ಲೋಕ ಎಂಬ ಕೃತಿ (ರಹಸ್ಯತ್ರಯ)ಗಳನ್ನು ಸರಳವಾದ ಕನ್ನಡ ಭಾಷೆಗೆ ಅನುವಾದಿಸಿ ಶ್ರೀಮತಿ ಎಂ.ಡಿ. ವೇದವಲ್ಲಿ ಮತ್ತು ಶ್ರೀಮತಿ ಎಂ.ಎ. ಸಿಂಗಮ್ಮ ಅಮೋಘ ಉಪಕಾರವನ್ನು ಮಾಡಿದ್ದಾರೆ. ಶ್ರೀಮತಿ ಎಂ.ಡಿ. ವೇದವಲ್ಲಿಯವರು ಈಗ ಕೆಲವು ತಿಂಗಳ ಹಿಂದೆ ಪತಿವಿಯೋಗ ದುಃಖವನ್ನು ಅನು

ಭವಿಸಬೇಕಾಯಿತು, ಆದರೆ ಶ್ರೀ ವೈಷ್ಣವತತ್ವದಲ್ಲೇ ಮುಳುಗಿ ಪಕ್ವವಾಗಿರುವ
ಶ್ರೀಮತಿಯವರು ಇಂತಹ ಪತಿವಿಯೋಗದಲ್ಲೂ ಅವರ ಪೆರಿಯತಿರುವಧ್ಯಯ
ನೋತ್ಸವ ಸಂದರ್ಭದಲ್ಲಿ ಮುಮುಕ್ಷುಗಳಿಗೆಲ್ಲ ಪರಮೋಪಾದೇಯವಾದ ಈ ಕಿರು
ಹೊತ್ತಿಗೆಯನ್ನು ಪ್ರಕಾಶಿಸುತ್ತಿರುವುದು ಸಂತಸದ ಸಂಗತಿ. ಶ್ರೀ ವೈಷ್ಣವ ಸಮು
ದಾಯ ಸೇವಾನಿಷ್ಟರೂ, ಆಚಾರ್ಯ ಭಕ್ತರೂ, ಪ್ರಪನ್ನರೂ ಆಗಿದ್ದ ಅವರ ಪತಿವರ್ಯ
ರಿಗೂ ಕೂಡ ಇದು ಆಮಂದಾನಂದವನ್ನು ತರುವುದರಲ್ಲಿ ಸಂದೇಹವಿಲ್ಲ. ಈ ಗ್ರಂಥದ
ಆವಿರ್ಭಾವಕ್ಕೆ ಶ್ರೀಮತಿ ವೇದವಲ್ಲಿಯವರ ಶ್ರೀ ವೈಷ್ಣವನಿಷ್ಠೆಯೇ ಕಾರಣ.
ಇವರು ವಿಶಿಷ್ಟಾದ್ವೈತ ಸಿದ್ಧಾಂತವನ್ನು ಆಳವಾಗಿ ಅಭ್ಯಸಿಸಿ ವಿಶೇಷ ಜ್ಞಾನ ಪಡೆ
ದಿದ್ದಾರೆ. ಇವರ ಪಿತೃವರ್ಯರಾದ ಪೂಜ್ಯ ಶ್ರೀ ಎಂ.ಎ. ನಾರಾಯಣಯ್ಯಂಗಾರ್ಯರೂ
ವಿಶಿಷ್ಟಾದ್ವೈತದಲ್ಲಿ ಆಳವಾದ ಪಾಂಡಿತ್ಯವನ್ನು ಹೊಂದಿದ್ದರು. ಅವರ ನಿರಂತರ
ಅಧ್ಯಯನ ಮತ್ತು ಲೇಖನಾಭ್ಯಾಸಗಳೇ ಅವರ ಕುಮಾರಿಯವರಲ್ಲೂ ಮೂಡಿರು
ವುದು ಶ್ಲಾಘನೀಯ ವಿಚಾರವೇಸರಿ.

ಇವರ ಲೇಖನಿಯಿಂದ ಇಂತಹ ಅನೇಕ ಹೊತ್ತಿಗೆಗಳು ಹೊರಬಂದಿವೆ. ಈ
ಕೃತಿಯಂತೆಯೇ ಲೋಕಾಚಾರ್ಯರ ಇತರ ಕೃತಿರತ್ನಗಳೂ ಇವರ ಲೇಖನಿಯಿಂದ
ಕನ್ನಡದಲ್ಲಿ ಹೊರಬರಲಿ ಎಂದು ಆಶಿಸುತ್ತೇನೆ. ಆಚಾರ್ಯಾಭಿಮಾನದಿಂದ ಶ್ರೀಮತಿ
ವೇದವಲ್ಲಿಯವರು ತಮ್ಮ ಪುಸ್ತಕಕ್ಕೆ ಮುನ್ನುಡಿಯನ್ನು ಬರೆಯಲು ಕೋರಿದ್ದಾರೆ.
ಅವರ ಇಚ್ಛೆಯಂತೆ ನನಗೆ ತಿಳಿದ ನಾಲ್ಕು ಮಾತುಗಳನ್ನು ನಾನು ನಿವೇದಿಸಿದ್ದೇನೆ.
ಅವರ ಪ್ರಸ್ತುತ ಪುಸ್ತಕ "ಮುಮುಕ್ಷುಪ್ಪಡಿಯು" ಶ್ರೀವೈಷ್ಣವನಿಷ್ಠರಿಗೆ ಉಪ
ಯುಕ್ತವಾಗಿ ಬೆಳಗಲಿ ಎಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

ಎಂ. ಎ. ಲಕ್ಷ್ಮೀತಾತಾಚಾರ್



ಪರಮಪದಿಸಿದ

**ಶ್ರೀ ಮಂಡಯಂ ದೊಡ್ಡಮನೆ ರಾಮಸ್ವಾಮಿ ಐಯ್ಯಂಗಾರ್**

**(1912 – 1992)**

**ಅವರ ಸ್ಮರಣಾರ್ಥವಾಗಿ ಪ್ರಕಟಿಸಲ್ಪಟ್ಟಿದೆ.**



## ಶ್ರೀಮತೇ ರಾಮಾನುಜಾಯ ನಮಃ

ಶ್ರೀಶೈಲೇಶದಯಾಪಾತ್ರಂ ಧೀಭಕ್ತ್ಯಾದಿ ಗುಣಾರ್ಣವಮ್।
ಯತೀಂದ್ರಪ್ರವಣಂ ವಂದೇ ರಮ್ಯಜಾಮಾತರಂ ಮುನಿಮ್॥

ಲಕ್ಷ್ಮೀನಾಥಸಮಾರಂಭಾಂ ನಾಥಯಾಮುನಮಧ್ಯಮಾಮ್।
ಅಸ್ಮದಾಚಾರ್ಯಪರ್ಯಂತಾಂ ವಂದೇ ಗುರುಪರಂಪರಾಮ್॥

ಯೋನಿತ್ಯಮಚ್ಯುತ ಪದಾಂಬುಜ ಯುಗ್ಮರುಕ್ಮ
ವ್ಯಾಮೋಹತಸ್ತದಿತರಾಣಿ ತೃಣಾಯ ಮೇನೇ।
ಅಸ್ಮದ್ಗುರೋರ್ಭಗವತೋಽಸ್ಯ ದಯೈಕಸಿಂಧೋಃ
ರಾಮಾನುಜಸ್ಯ ಚರಣೌ ಶರಣಂ ಪ್ರಪದ್ಯೇ॥

ಲೋಕಾಚಾರ್ಯಾಯ ಗುರವೇ
ಕೃಷ್ಣ ಪಾದಸ್ಯ ಸೂನವೇ
ಸಂಸಾರ ಭೋಗಿ ಸಂದಷ್ಟ
ಜೀವ ಜೀವಾತವೇ ನಮಃ॥

ಶ್ರೀಮನ್ ಲೋಕಗುರುವೇ ನಮಃ
ಶ್ರೀಮನ್ ಮಣವಾಳ ಮಾಮುನಯೇ ನಮಃ

ಶ್ರೀಮತೇ ರಾಮಾನುಜಾಯ ನಮಃ

ಲೋಕಾಚಾರ್ಯಾಯ ಗುರವೇ ಕೃಷ್ಣ ಪಾದಸ್ಯ ಸೂನವೇ।
ಸಂಸಾರಭೋಗಿಸಂದಷ್ಟ ಜೀವಜೀವಾತವೇ ನಮಃ॥

ಶ್ರೀಮನ್ ಲೋಕಗುರವೇ ನಮಃ

---

ಶ್ರೀ ಪಿಳ್ಳೈ ಲೋಕಾಚಾರ್ಯರು ಅನುಗ್ರಹಿಸಿದ

# ಮುಮುಕ್ಷುಪ್ಪಡಿ

## ತಿರುಮಂತ್ರ ಪ್ರಕರಣವು

**ಓಂ ನಮೋ ನಾರಾಯಣಾಯ ಎಂಬ ತಿರುಮಂತ್ರವು**

## ಉಪೋದ್ಘಾತ

## ತಿರುಮಂತ್ರದ ವೈಭವ

(ಸೂತ್ರಗಳು 1 ರಿಂದ 27)

1. **ಮುಮುಕ್ಷುವುಕ್ಕು ಅರಿಯವೇಂಡುವ ರಹಸ್ಯಮ್ ಮೂನ್ರು.**

ಮೋಕ್ಷದಲ್ಲಿ ಇಚ್ಛೆಯುಳ್ಳವನು ತಿಳಿಯಬೇಕಾದ ರಹಸ್ಯಗಳು ಮೂರು. (ಯಾವುವೆಂದರೆ ತಿರುಮಂತ್ರ, ದ್ವಯ ಮತ್ತು ಚರಮ ಶ್ಲೋಕಗಳು.)

2. **ಅದಿಲ್ ಪ್ರಥಮ ರಹಸ್ಯಮ್ ತಿರುಮಂತ್ರಮ್.**

ಅವುಗಳಲ್ಲಿ ಮೊದಲನೆಯ (ಮೊದಲು ಅರಿಯಬೇಕಾದ) ರಹಸ್ಯವು ತಿರುಮಂತ್ರವು.

3. **ತಿರುಮಂತ್ರತ್ತಿನುಡೈಯ ಶೀರ್‌ಮೈಕ್ಕು ಪ್ಪೋರುಮ್ಪಡಿ ಪ್ರೇಮತ್ತೋಡೇಪೇಣಿ ಅನುಸಂಧಿಕ್ಕ ವೇಣುಮ್.**

ತಿರುಮಂತ್ರದ ಮಹತ್ವಕ್ಕೆ ತಕ್ಕಂತೆ ಶ್ರದ್ಧೆ ಮತ್ತು ವಿಶ್ವಾಸಗಳನ್ನು ಹೊಂದಿ ಅದನ್ನು ಅನುಸಂಧಾನ ಮಾಡಬೇಕು.

4. **ಮಂತ್ರತ್ತಿಲುಮ್ ಮಂತ್ರತ್ತುಕ್ಕುಳ್ಳೀಡಾನ ವಸ್ತುವಿಲುಮ್ ಮಂತ್ರ ಪ್ರದನಾನ ಆಚಾರ್ಯನ್ ಪಕ್ಕಲಿಲುಮ್ ಪ್ರೇಮಂ ಕನಕ್ಕವುಂಡಾನಾಲ್ ಕಾರ್ಯಕರಮಾವದು.**

ಮಂತ್ರದಲ್ಲಿಯೂ, ಮಂತ್ರದಲ್ಲಿ ಪ್ರತಿಪಾದಿಸಲ್ಪಡುವ ಈಶ್ವರನಲ್ಲಿಯೂ, ಮಂತ್ರವನ್ನು ಉಪದೇಶಿಸಿರುವ ಆಚಾರ್ಯನಲ್ಲಿಯೂ ಪ್ರೀತಿಯು ಅಧಿಕವಾಗಿದ್ದರೆ ಮಂತ್ರವು ಫಲಕಾರಿಯಾಗುತ್ತದೆ.

5. **ಸಂಸಾರಿಗಳ್ ತಂಗಳೈಯುಂ ಈಶ್ವರನೈಯುಂ ಮರಂದು ಈಶ್ವರ ಕೈಂಕರ್ಯತ್ತೈಯುಂ ಇಳಂದು ಇಳಂದೋಮ್ ಎನ್ಗಿರ ಇಳವುಮಿನ್ರಿಕ್ಕೇ ಸಂಸಾರಮಾಗಿರ ಪೆರುಮ್ ಕಡಲಿಲೇ ವಿಳುನ್ದು ನೋವುಪಡ, ಸರ್ವೇಶ್ವರನ್ ತನ್ ಕೃಪೈಯಾಲೇ ಇವರ್ಗಳ್ ತನ್ನೈ ಅರಿಂದು ಕರೈಮರಮ್ ಶೇರುಂಪಡಿ ತಾನೇ ಶಿಷ್ಯನು-ಮಾಯ್ ಆಚಾರ್ಯನುಮಾಯ್ ನಿನ್ರು ತಿರುಮಂತ್ರತ್ತೈ ವೆಳಿಯಿಟ್ಟರುಳಿನಾನ್.**

ಸಂಸಾರಿಗಳು ತಮ್ಮನ್ನೂ, ಪರಮಾತ್ಮನನ್ನೂ ಮರೆತು, ಪರಮಾತ್ಮನ ಕೈಂಕರ್ಯವನ್ನು ಮಾಡದೆ, ಅದನ್ನು ತಾವು ಮಾಡುತ್ತಿಲ್ಲವೆಂಬ ವ್ಯಸನವೂ ಇಲ್ಲದೆ, ಸಂಸಾರವೆಂಬ ಮಹಾಸಾಗರದಲ್ಲಿ ಬಿದ್ದು ಕ್ಲೇಶಪಡುತ್ತಿರಲು, ಸರ್ವೇಶ್ವರನು ತನ್ನ ಕೃಪಾಗುಣದಿಂದ, ಇವರುಗಳು ತನ್ನನ್ನು ಅರಿತು ಪದವನ್ನು ಸೇರಲಿ ಎಂದು ತಾನೇ ಶಿಷ್ಯನಾಗಿಯೂ, ಆಚಾರ್ಯನಾಗಿಯೂ ನಿಂತು ತಿರುಮಂತ್ರವನ್ನು ಉಪದೇಶಿಸಿ ಕೃಪೆ ಮಾಡಿದ್ದಾನೆ.

6. **ಶಿಷ್ಯನಾಯ್ ನಿನ್ರದು ಶಿಷ್ಯನಿರುಕ್ಕುಮ್ ಇರುಪ್ಪನಾಟ್ಟಾರ್ ಅರಿಯಾಮೈಯಾಲೇ ಅತ್ತೈ ಅರಿವಿಕ್ಕೈಕ್ಕಾಗ.**

ಶಿಷ್ಯನಾಗಿ ನಿಂತಿದ್ದುದು ಶಿಷ್ಯನಿಗೆ ಇರಬೇಕಾದ ಲಕ್ಷಣವನ್ನು ಲೋಕದ ಜನರು ಅರಿಯದೆ ಇರುವುದರಿಂದ ಅದನ್ನು ಅವರಿಗೆ ತಿಳಿಸುವುದಕ್ಕಾಗಿ,

7. **ಸಕಲ ಶಾಸ್ತ್ರಂಗಳಾಲುಂಮ್ ಪಿರಕ್ಕುಂ ಜ್ಞಾನಮ್ ಸ್ವಯ ಮಾರ್ಜಿತಮ್ ಪೋಲೇ; ತಿರುಮಂತ್ರತ್ತಾಲ್ ಪಿರಕ್ಕುಮ್ ಜ್ಞಾನಮ್ ಪೈತೃಕ ಧನಮ್ ಪೋಲೆ.**

ಸಕಲ ಶಾಸ್ತ್ರಗಳಿಂದ ಉಂಟಾಗುವ ಜ್ಞಾನವು ಸ್ವತಃ ಸಂಪಾದಿಸಿದ ಧನ ದಂತೆ (ಕಷ್ಟಸಾಧ್ಯವಾದುದಾಗಿದೆ); ತಿರುಮಂತ್ರದಿಂದ ಉಂಟಾಗುವ ಜ್ಞಾನವು ಪಿತ್ರಾರ್ಜಿತವಾದ ಧನದಂತೆ (ಸುಲಭಸಾಧ್ಯವಾದುದಾಗಿದೆ).

8. **ಭಗವನ್ ಮಂತ್ರಂಗಳ್ ತಾನ್ ಅನೇಕಂಗಳ್.**

ಭಗವಂತನ ಮಂತ್ರಗಳು ಅನೇಕವಾಗಿವೆ.

9. **ಅವೈತಾನ್ ವ್ಯಾಪಕಂಗಳ್ ಎನ್ರುಮ್ ಅವ್ಯಾಪಕಂಗಳ್ ಎನ್ರುಮ್ ಇರಂಡು ವರ್ಗಮ್.**

ಅವುಗಳು ವ್ಯಾಪಕಗಳೆಂದೂ, ಅವ್ಯಾಪಕಗಳೆಂದೂ ಎರಡು ಬಗೆಯಾಗಿವೆ. (ಭಗವಂತನ ಸರ್ವ ವ್ಯಾಪಕವಾದ ಸ್ವರೂಪವನ್ನು ಪ್ರತಿಪಾದಿಸುವ ಮಂತ್ರ ಗಳು ವ್ಯಾಪಕ ಮಂತ್ರಗಳೆಂದೂ, ಭಗವಂತನ ಅವತಾರ ಗುಣ ಚೇಷ್ಟಿತಾದಿ ಗಳಲ್ಲಿ ಒಂದೊಂದನ್ನು ಮಾತ್ರ ಪ್ರತಿಪಾದಿಸುವ ಮಂತ್ರಗಳು ಅವ್ಯಾಪಕ ಗಳೆಂದೂ ತಿಳಿಸಲ್ಪಟ್ಟಿವೆ.)

10. **ಅವ್ಯಾಪಕಂಗಳಿಲ್ ವ್ಯಾಪಕಂಗಳ್ ಮೂನ್ರುಮ್ ಶ್ರೇಷ್ಠಂಗಳ್.**

ಅವ್ಯಾಪಕ ಮಂತ್ರಗಳಿಗಿಂತ ಮೂರು ವ್ಯಾಪಕ ಮಂತ್ರಗಳು ಶ್ರೇಷ್ಠ ವಾಗಿವೆ. (ಅವು ಯಾವುವೆಂದರೆ:—(1) ಓಂ ನಮೋ ವಿಷ್ಣವೇ (2) ಓಂ ನಮೋ ನಾರಾಯಣಾಯ (3) ಓಂ ನಮೋ ಭಗವತೇ ವಾಸುದೇವಾಯ).

11. **ಇವೈ ಮೂನ್ರಿಲುಮ್ ವೈತ್ತುಕ್ಕೊಂಡು ಪೆರಿಯ ತಿರುಮಂತ್ರಮ್ ಪ್ರಧಾನಮ್.**

ಈ ಮೂರು ವ್ಯಾಪಕ ಮಂತ್ರಗಳಲ್ಲಿ ಮಹಾಮಂತ್ರವಾದ "ಓಂ ನಮೋ ನಾರಾಯಣಾಯ" ಎಂಬ ತಿರುಮಂತ್ರವು ಪ್ರಧಾನವಾದುದು.

12. **ಮತ್ತೈಯವೈ ಇರಂಡುಕ್ಕುಮ್ ಅಶಿಷ್ಟ ಪರಿಗ್ರಹಮುಮ್ ಅಪೂರ್ತಿಯುಂ ಉಂಡು.**

ಮಿಕ್ಕ ಎರಡು ವ್ಯಾಪಕ ಮಂತ್ರಗಳು ಶಿಷ್ಟರಲ್ಲದವರು ಆದರಿಸುವಂತಹುದಾಗಿಯೂ, ಅಪೂರ್ಣವಾದ ಅರ್ಥವುಳ್ಳದ್ದಾಗಿಯೂ ಇವೆ. (ಏತಕ್ಕೆಂದರೆ ವಿಷ್ಣು ಮತ್ತು ವಾಸುದೇವ ಮಂತ್ರಗಳು ಆವನ ವ್ಯಾಪಕ ಸ್ವರೂಪವನ್ನು ಮಾತ್ರ ಪ್ರತಿಪಾದಿಸುತ್ತವೆ.)

**13. ಇತ್ತೈ ವೇದಂಗಳುಮ್ ಋಷಿಗಳುಮ್ ಆಳ್ವಾರ್‌ಗಳುಮ್ ಆಚಾರ್ಯರ್‌ಗಳುಮ್ ವಿರುಂಬಿನಾರ್‌ಗಳ್.**

ಈ ಮಂತ್ರವನ್ನು ವೇದಗಳೂ, (ಉಪನಿಷತ್ತುಗಳೂ) ಋಷಿಗಳೂ, ಆಳ್ವಾರುಗಳೂ, ಆಚಾರ್ಯರುಗಳೂ ಆದರಿಸಿದ್ದಾರೆ.

**14. ವಾಚ್ಯಪ್ರಭಾವತ್ ಪೋಲನ್ರು ವಾಚಕಪ್ರಭಾವಮ್.**

ಪರಮಾತ್ಮವಾಚಕವಾದ ಮಂತ್ರದ ಪ್ರಭಾವವು ಮಂತ್ರದಲ್ಲಿ ವಾಚ್ಯನಾಗಿ ಪ್ರತಿಪಾದಿಸಲ್ಪಟ್ಟಿರುವ ಪರಮಾತ್ಮನ ಪ್ರಭಾವದ ಹಾಗಲ್ಲ. (ಅದಕ್ಕಿಂತ ಮೇಲಾದುದು ಎಂದು ಅರ್ಥ.)

**15. ಅವನ್ ದೂರಸ್ಥನಾನಾಲುಮ್ ಇದು ಕಿಟ್ಟನಿನ್ರು ಉದವುಮ್.**

ಪರಮಾತ್ಮನು ದೂರದಲ್ಲಿದ್ದರೂ (ಅವನ ನಾಮವಾದ) ಈ ಮಂತ್ರವು ಅನುಸಂಧಾನವನ್ನು ಮಾಡುವವನಿಗೆ ಹತ್ತಿರದಲ್ಲಿದ್ದುಕೊಂಡು ಅವರ ಇಷ್ಟಾರ್ಥಗಳನ್ನು ಸಾಧಿಸಿಕೊಡುತ್ತದೆ.

**16. ದ್ರೌಪದಿಕ್ಕು ಆಪತ್ತಿಲೇ ಪುಡೈವೈ ಶುರಂದದು ತಿರುನಾಮಮಿರೇ.**

ದ್ರೌಪದಿಗೆ ಆಪತ್ಕಾಲದಲ್ಲಿ ಅವಳ ಸೀರೆಗಳು ಹೆಚ್ಚಾಗುವಂತೆ ಮಾಡಿ ರಕ್ಷಿಸಿದುದು ಭಗವಂತನ ದಿವ್ಯವಾದ ನಾಮವಲ್ಲವ!

**17. ಶೊಲ್ಲುಮ್ ಕ್ರಮನೊಳಿಯಚ್ಚೊನ್ನಾಲುಮ್ ತನ್ ಸ್ವರೂಪಂ ಕೆಡನಿಲ್ಲಾದು.**

ಮಂತ್ರವನ್ನು ಹೇಳುವ ಕ್ರಮ ತಪ್ಪಿ ಹೇಳಿದರೂ ಕೂಡ, ಅದರ ಅನುಸಂಧಾನ ಮಾಡುವವರನ್ನು ರಕ್ಷಿಸುವ ಸ್ವರೂಪದಲ್ಲಿ ಯಾವ ಕೊರತೆಯೂ ಉಂಟಾಗುವುದಿಲ್ಲ.

**18. ಇದು ತಾನ್ "ಕುಲನ್ದರುಮ್" ಎನ್ನಿರ ಪಡಿಯೇ ಎಲ್ಲಾ ಅಪೇಕ್ಷಿತಂಗಳೈಯುಮ್ ಕೊಡುಕ್ಕುಮ್.**

ಈ ಮಂತ್ರವು "ಕುಲಂತರುಂ" ಎಂಬ ತಿರುಮಂಗೈಆಳ್ವಾರವರ ಪೆರಿಯ ತಿರುಮೊಳಿ (1–1–9) ಪಾಶುರದಲ್ಲಿ ಹೇಳಿರುವಂತೆ ಎಲ್ಲಾ ಇಷ್ಟಾರ್ಥಗಳನ್ನೂ ಕೊಡುತ್ತದೆ.

**19. ಐಶ್ವರ್ಯ ಕೈವಲ್ಯ ಭಗವಲ್ಲಾಭಂಗಳೈ ಆಶೈಪಟ್ಟವರ್‌ಗಳುಕ್ಕು ಅವತ್ತೈ ಕೊಡುಕ್ಕುಮ್.**

ಇಹಪರ ಲೋಕಗಳ ಐಶ್ವರ್ಯವನ್ನೂ, ಆತ್ಮಾನುಭವವೆಂಬ ಕೈವಲ್ಯವನ್ನೂ, ಭಗವದನುಭವವನ್ನೂ, ಆಸೆ ಪಡುವವರಿಗೆ ಆಯಾ ಪುರುಷಾರ್ಥಗಳನ್ನೂ ಕೊಡುತ್ತದೆ.

**20. ಕರ್ಮ, ಜ್ಞಾನ, ಭಕ್ತಿಗಳಿಲೇ ಇಳಿಂದವರ್‌ಗಳುಕ್ಕು ವಿರೋಧಿಯೈ ಪೋಕ್ಕಿ ಅವತ್ತೈತ್ತಲೈಕ್ಕಟ್ಟಿಕೊಡುಕ್ಕುಮ್.**

ಕರ್ಮ, ಜ್ಞಾನ, ಭಕ್ತಿ ಸಾಧನೆಗಳನ್ನು ಆಚರಿಸುವವರಿಗೆ ಅವುಗಳನ್ನು ಆರಂಭಿಸಲು ತಡೆಯಾಗಿರುವ (ಪಾಪಾದಿ) ವಿರೋಧಿಗಳನ್ನು ಹೋಗಲಾಡಿಸಿ, ಆಯಾ ಯೋಗ ಸಾಧನೆಗಳನ್ನು ಪೂರ್ತಿಯಾಗಿ ನೆರವೇರಿಸಲು ಸಹಾಯ ಮಾಡುತ್ತದೆ.

**21. ಪ್ರಪತ್ತಿಯಿಲೇ ಇಳಿಂದವರ್‌ಗಳುಕ್ಕು ಸ್ವರೂಪ ಜ್ಞಾನತ್ತೈ ಪಿರಪ್ಪಿತ್ತು ಕಾಲಕ್ಷೇಪತ್ತುಕ್ಕುಮ್ ಭೋಗತ್ತುಕ್ಕುಮ್ ಹೇತುವಾಯಿರುಕ್ಕುಮ್.**

(ಈ ಮಂತ್ರವು) ಪ್ರಪತ್ತಿ ಮಾರ್ಗದಲ್ಲಿ ನಿರತರಾದವರಿಗೆ ಆತ್ಮ ಸ್ವರೂಪ ಜ್ಞಾನವನ್ನು ಉಂಟುಮಾಡಿ ಇದರ ಅರ್ಥಾನುಸಂಧಾನದಿಂದ ಕಾಲ ಕಳೆಯುವುದಕ್ಕೂ ಸ್ವಯಂ ಭೋಗ್ಯವಾಗಿ ಭೋಗಾನುಭವಕ್ಕೂ ಕಾರಣವಾಗಿದೆ.

**22. "ಮತ್ತೆಲ್ಲಾಮ್ ಪೇಶಿಲುಮ್" ಎನ್ನಿರಪಡಿಯೇ ಅರಿಯವೇಂಡುಮ್ ಅರ್ಥಮೆಲ್ಲಾಮ್ ಇದುಕ್ಕುಳ್ಳೇ ಉಂಡು.**

"ಮತ್ತೆಲ್ಲಾಂ ಪೇಶಿಲುಂ" ಅಂದರೆ ನಿನ್ನ ಅಷ್ಟಾಕ್ಷರ ಮಂತ್ರವು ತಿಳಿಯಬೇಕಾದ ಅರ್ಥವಿಶೇಷಗಳನ್ನೆಲ್ಲಾ ತಿಳಿಸುತ್ತದೆ ಎಂದು ಪೆರಿಯತಿರುಮೊಳಿ

(8-10-3) ಪಾಶುರದಲ್ಲಿ ತಿರುಮಂಗೈ ಆಳ್ವಾರವರು ಹೇಳಿರುವಂತೆ ತಿಳಿಯಬೇಕಾದ ಅರ್ಥವಿಶೇಷಗಳೆಲ್ಲಾ ಈ ಮಂತ್ರದಲ್ಲಿ ಅಡಗಿವೆ.

**23. ಅದಾವದು ಅಂಜರ್ಥಮ್.**

ಅವು ಯಾವುವೆಂದರೆ ಜೀವಾತ್ಮ ಸ್ವರೂಪ, ಪರಮಾತ್ಮ ಸ್ವರೂಪ, ಉಪಾಯ ಸ್ವರೂಪ, ವಿರೋಧಿ ಸ್ವರೂಪ, ಪುರುಷಾರ್ಥ ಸ್ವರೂಪವೆಂಬ ಅರ್ಥಪಂಚಕಗಳು.

**24. ಪೂರ್ವಾಚಾರ್ಯರ್‌ಗಳ್ ಇದಿಲ್ ಅರ್ಥಮ್ ಅರಿವದಕ್ಕು ಮುನ್ಬು ತಂಗಳೈ ಪ್ಪಿರನ್ದಾರ್‌ಗಳಾಕ ನಿನೈತ್ತಿರಾರ್‌ಗಳ್; ಇದಿಲ್ ಅರ್ಥಜ್ಞಾನಮ್ ಪಿರಂದ ಪಿನ್ಬು "ಪಿರಂದಪಿನ್ ಮರಂದಿಲೇನ್" ಎನ್ಗಿರಪಡಿಯೇ ಇತ್ತೈಯೊಳಿಯ ವೇರೊ-ನ್ರಾಲ್ ಕಾಲಕ್ಷೇಪಮ್ ಪಣ್ಣಿ ಅರಿಯಾರ್‌ಗಳ್.**

ಪೂರ್ವಾಚಾರ್ಯರುಗಳು ಇದರ ಅರ್ಥವನ್ನು ತಿಳಿದುಕೊಳ್ಳುವುದಕ್ಕೆ ಮುಂಚೆ ತಾವು ಪ್ರಪಂಚದಲ್ಲಿ ಹುಟ್ಟಿಲ್ಲದಹಾಗೆಯೇ ಭಾವಿಸಿದ್ದರು. ಇದರ ಅರ್ಥಜ್ಞಾನವು ಉಂಟಾದ ಮೇಲೆ "ಪಿರಂದಪಿನ್‌ಮರಂದಿಲೇನ್" —ಅಂದರೆ "ಹುಟ್ಟಿದ ಮೇಲೆ ಅದನ್ನು ಮರೆಯುವುದಿಲ್ಲ"—ಎಂದು ತಿರುಚ್ಚಂದವಿರುತ್ತ (64ನೇ ಪಾಶುರ)ದಲ್ಲಿ ಹೇಳಿರುವಂತೆ ಈ ಮಂತ್ರಾನುಸಂಧಾನವನ್ನು ಬಿಟ್ಟು ಬೇರೆ ಯಾವುದರಿಂದಲೂ ಕಾಲ ಕಳೆಯುತ್ತಿರಲಿಲ್ಲ.

**25. ವಾಚಕತ್ತಿರ್ಕ್ಕಾಟ್ಟಿಲ್ ವಾಚ್ಯತ್ತಿಲೇ ಊನ್ರುಗೈಕ್ಕಡಿ ಈಶ್ವರನೇ ಉಪಾಯೋಪೇಯಮ್ ಎನ್ರು ನಿನೈತ್ತಿರುಕ್ಕೈ.**

ವಾಚಕವಾದ ತಿರುಮಂತ್ರಕ್ಕಿಂತ ಮಂತ್ರವಾಚ್ಯನಾದ ಪರಮಾತ್ಮನಲ್ಲಿ ಶ್ರದ್ಧೆಯು ಅಧಿಕವಾಗಿರುವುದಕ್ಕೆ ಪರಮಾತ್ಮನೇ ಗತಿಯು ಮತ್ತು (ಅವನ ಕೈಂಕರ್ಯವೇ) ಪುರುಷಾರ್ಥವು ಎಂದು ತಿಳಿದಿರುವುದೇ ಕಾರಣವು.

**26. ಇದು ತನ್ನಿಲ್ ಶೊಲ್ಲುಗಿರ ಅರ್ಥಮ್ ಸ್ವರೂಪಮುಮ್ ಸ್ವರೂಪಾನುರೂಪಮಾನ ಪ್ರಾಪ್ಯಮುಮ್; ಸ್ವರೂಪಮುಮ್, ಉಪಾಯಮುಮ್, ಫಲಮುಮ್ ಎನ್ನುವುಮಾಮ್,**

ಈ ಮಂತ್ರದಲ್ಲಿ ಹೇಳಿರುವ ಅರ್ಥವು ಏನೆಂದರೆ ಪ್ರಣವ ಮತ್ತು ನಮಸ್ಸಿನಲ್ಲಿ ತಿಳಿಸಿರುವ ಶೇಷತ್ವ ಮತ್ತು ಪಾರತಂತ್ರ್ಯಗಳೆಂಬ ಆತ್ಮ ಸ್ವರೂಪವೂ, ನಾರಾಯಣಾಯ ಎಂಬ ಪದದಲ್ಲಿ ತಿಳಿಸಿರುವ ಆತ್ಮ ಸ್ವರೂಪಕ್ಕೆ ಅನುರೂಪವಾದ ಭಗವತ್ಕೈಂಕರ್ಯವೆಂಬ ಪುರುಷಾರ್ಥವೂ; ಅಲ್ಲದೆ ಪ್ರಣವದಲ್ಲಿ ಭಗವದನನ್ಯಾರ್ಹ ಶೇಷತ್ವ (ಅಂದರೆ ಭಗವಂತನಿಗೇ ತಾನು ದಾಸನು) ಎಂಬ ಸ್ವರೂಪವೂ, ನಮಸ್ಸಿನಲ್ಲಿ ಭಗವದೇಕ ಶರಣ್ಯತ್ವ (ಭಗವಂತನೊಬ್ಬನೇ ತನಗೆ ರಕ್ಷಕನು) ಎಂಬ ಉಪಾಯವೂ, ನಾರಾಯಣ ಪದದಲ್ಲಿ ಭಗವಂತನ ಆನಂದಕ್ಕಾಗಿಯೇ ಅವನಿಗೇ ಕೈಂಕರ್ಯ ಮಾಡಬೇಕೆಂಬ ಪುರುಷಾರ್ಥವೂ ಹೇಳಲ್ಪಟ್ಟಿದೆ.

**27. ಫಲಸ್ವರುಕ್ಕುಂಪಡಿ ಪ್ರಮೆಯಶೇಖರತ್ತಿಲುಂವ್ ಅರ್ಚಿರಾದಿ. ಗತಿಯಿಲುಂವ್ ಶೊನ್ನೋಂ.**

ಫಲಸ್ವರೂಪದ ವಿಷಯವನ್ನು ಪ್ರಮೇಯ ಶೇಖರದಲ್ಲಿಯೂ, ಅರ್ಚಿರಾದಿಗತಿಯಲ್ಲಿಯೂ ಹೇಳಿದೆ.

## ಮಂತ್ರಾರ್ಥ ಪ್ರತಿಪಾದನೆ
## (ಸೂತ್ರಗಳು 28 ರಿಂದ 30)

**28. ಇದು ತಾನ್ ಎಟ್ಟುತ್ತಿರುವಕ್ಷರಮಾಯ್ ಮೂನ್ರು ಪದಮಾಯ್ ಇರುಕ್ಕುಮ್.**

ಈ ಮಂತ್ರವು 'ಓಂ, ನ, ಮಃ, ನಾ, ರಾ, ಯ, ಣಾ, ಯ'—ಎಂದು ಎಂಟು ಪವಿತ್ರವಾದ ಅಕ್ಷರವುಳ್ಳದ್ದಾಗಿಯೂ; 'ಓಂ, ನಮಃ, ನಾರಾಯಣಾಯ' ಎಂದು ಮೂರು ಪದಗಳಿಂದ ಕೂಡಿದ್ದಾಗಿಯೂ ಇದೆ.

**29. ಮೂನ್ರು ಪದಮುಮ್ ಮೂನ್ರು ಅರ್ಥತ್ತೈ ಚೊಲ್ಲುಗಿರದು.**

ಮೂರು ಪದಗಳೂ ಮೂರು ಅರ್ಥವನ್ನು ತಿಳಿಸುತ್ತವೆ.

**30. ಅದಾವದು ಶೇಷತ್ವಮುುಮ್, ಪಾರತಂತ್ರ್ಯಮುುಮ್ ಕೈಂಕರ್ಯಮುುಮ್.**

ಅದೇನೆಂದರೆ 'ಓಂ' ಎಂಬುದು (ನಾನು ಭಗವಂತನಿಗೆ ಅಧೀನನು ಮತ್ತು ದಾಸನು ಎಂಬ) ಶೇಷತ್ವವನ್ನೂ; 'ನಮಃ' ಎಂಬುದು (ನಾನು ಅವನಿಗೆ ಪರತಂತ್ರನು ಎಂಬ) ಪಾರತಂತ್ರ್ಯವನ್ನೂ; 'ನಾರಾಯಣಾಯ' ಎಂಬುದು ಅವನ (ಕೈಂಕರ್ಯವೇ ನನಗೆ ಪುರುಷಾರ್ಥವು) ಎಂಬ ಕೈಂಕರ್ಯವನ್ನೂ ತಿಳಿಸುತ್ತವೆ.

## ಓಂ ಎಂಬ ಪ್ರಣವಾರ್ಥ ಪ್ರತಿಪಾದನೆ
## (ಸೂತ್ರಗಳು 31 ರಿಂದ 74)

**31. ಇದಿಲ್ ಮುದಲ್ ಪದಂ ಪ್ರಣವಮ್.**

ಇದರಲ್ಲಿ ಮೊದಲನೆಯ ಪದವು 'ಓಂ' ಎಂಬ ಪ್ರಣವವು.

**32. ಇದು "ಅ" ಎನ್ರುಮ್, "ಉ" ಎನ್ರುಮ್, "ಮ" ಎನ್ರುಮ್ ಮೂನ್ರು ತಿರುವಕ್ಷರಮ್.**

ಪ್ರಣವವು "ಅ" ಎಂದೂ, "ಉ" ಎಂದೂ, "ಮ" ಎಂದೂ ಮೂರು ಅಕ್ಷರಗಳನ್ನು ಹೊಂದಿದೆ. (ಓಂ=ಅ+ಉ+ಮ)

**33. ಮೂನ್ರು ತಾಳಿಯಿಲೆ ತಯಿರ್ರೈ ನಿರೈತ್ತು ಕ್ಕಡೈಂದು ವೆಣ್ಣೈಯ್ ತಿರಟ್ಟುಮಾ ಪೋಲೆ ಮೂನ್ರು ವೇದತ್ತಿಲುಮ್ ಮೂನ್ರು ಅಕ್ಷರತ್ತೈಯುಂ ಎಡುತ್ತದು.**

ಮೂರು ಪಾತ್ರೆಗಳಲ್ಲಿ ಮೊಸರನ್ನು ತುಂಬಿ ಅದನ್ನು ಕಡೆದು ಬೆಣ್ಣೆಯನ್ನು ತೆಗೆದು ಅದನ್ನು ಒಟ್ಟಿಗೆ ಸೇರಿಸುವಂತೆ (ಋಗ್ವೇದ, ಯಜುರ್ವೇದ, ಸಾಮವೇದಗಳೆಂಬ) ಮೂರು ವೇದಗಳಿಂದ ಅ, ಉ, ಮ ಎಂಬ ಮೂರು ಅಕ್ಷರಗಳನ್ನು ತೆಗೆದುಕೊಂಡಿದೆ. (ಅ+ಉ+ಮ=ಓಂ)

**34. ಆಗೈಯಾಲ್ ಇದು ಸಕಲವೇದಸಾರಮ್.**

ಆದುದರಿಂದ ಈ ಪ್ರಣವವು ಸಕಲ ವೇದಗಳ ಸಾರವು.

## ಅಕಾರದ ಅರ್ಥ

### ಅಕಾರದಲ್ಲಿ ಕಾರಣತ್ವ, ರಕ್ಷಕತ್ವಗಳ ಪ್ರತಿಪಾದನೆ
### (ಸೂತ್ರಗಳು 35 ರಿಂದ 39)

**35. ಇದಿಲ್ ಅಕಾರಮ್ ಸಕಲ ಶಬ್ದತ್ತುಕ್ಕುಮ್ ಕಾರಣಮಾಯ್ ನಾರಾಯಣ ಪದತ್ತುಕ್ಕು ಸಂಗ್ರಹಮಾಯ್ ಇರುಕ್ಕೈಯಾಲೆ ಸಕಲ ಜಗತ್ತುಕ್ಕುಮ್ ಕಾರಣಮಾಯ್ ಸರ್ವರಕ್ಷಕನಾನ ಎಂಬೆರುಮಾನೈ ಚೊಲ್ಲುಕಿರದು.**

ಇದರಲ್ಲಿ "ಅ" ಎಂಬ ಅಕ್ಷರವು ಸಕಲ ಶಬ್ದಗಳಿಗೂ ಕಾರಣವಾಗಿ ನಾರಾಯಣ ಪದಕ್ಕೆ ಸಂಗ್ರಹವಾಗಿ ಇರುವುದರಿಂದ ಸಕಲ ಜಗತ್ತಿಗೂ ಕಾರಣನಾಗಿರುವ ಸರ್ವ ರಕ್ಷಕನಾದ ಪರಮಾತ್ಮನನ್ನು ತಿಳಿಸುತ್ತದೆ. (ಅಕಾರವು ಪ್ರಕೃತ್ಯರ್ಥದ ಪ್ರಕಾರ—ಕಾರಣತ್ವವನ್ನೂ, ದಾತ್ವರ್ಥದ ಪ್ರಕಾರ—ರಕ್ಷಕತ್ವವನ್ನೂ ತಿಳಿಸುತ್ತದೆ—'ಅಕಾರೋ ವೈ ಸರ್ವಾ ವಾಕ್' ಎಂದು ವೇದದಲ್ಲಿ ಹೇಳಿದೆ. ಅಕಾರಕ್ಕೆ ಅವರಕ್ಷಣೆ ಎಂಬುದು ಧಾತು. 'ಅಕ್ಷರಾಣಾಂ ಅಕಾರೋಽಸ್ಮಿ' ಎಂದು ಗೀತೆಯಲ್ಲೂ 'ಅ ಇತಿ ಬ್ರಹ್ಮ' ಎಂದು ವೇದದಲ್ಲೂ, 'ಅಕಾರೋ ವಿಷ್ಣುವಾಚಕಃ' ಎಂದು ಪಾಂಚರಾತ್ರದಲ್ಲೂ ತಿಳಿಸಿದೆ.)

**36. ರಕ್ಷಿಕ್ಕೈಯಾವದು—ವಿರೋಧಿಯೈ ಪೋಕ್ಕುಗೈಯುಮ್ ಅಪೇಕ್ಷಿತತ್ತೈ ಕೊಡುಕ್ಕೈಯುಮ್.**

ರಕ್ಷಿಸುವುದು ಎಂದರೆ ವಿರೋಧಿಗಳನ್ನು ನಾಶಮಾಡುವುದು ಮತ್ತು ಅಪೇಕ್ಷಿತಗಳನ್ನು ಕೊಡುವುದು ಎಂದು ಅರ್ಥ.

**37. ಇವ್ವೈ ಇರಂಡುವುವ್ ಚೇತನರ್ ನಿನ್ರನಿನ್ರವಳವುಕ್ಕೀಡಾಯಿ ರುಕ್ಕುಮವ್.**

(ವಿರೋಧಿನಿರಸನ ಮತ್ತು ಇಷ್ಟಾರ್ಥಸಿದ್ಧಿ ಎಂಬ) ಇವೆರಡೂ ಮಾನವರ ಸ್ಥಿತಿಗತಿಗಳಿಗೆ ಅನುಗುಣವಾಗಿರುತ್ತವೆ.

**38. ಸಂಸಾರಿಗಳುಕ್ಕು ವಿರೋಧಿ ಶತ್ರು ಪೀಡಾದಿಗಳ್; ಅಪೇಕ್ಷಿತವುವ್ ಅನ್ನಪಾನಾದಿಗಳ್; ಮುಮುಕ್ಷುಕ್ಕಳುಕ್ಕು ವಿರೋಧಿ ಸಂಸಾರ ಸಂಬಂಧವುವ್; ಅಪೇಕ್ಷಿತವುವ್ ಪರಮಪದ ಪ್ರಾಪ್ತಿ. ಮುಕ್ತರ್ಕ್ಕುಮವ್, ನಿತ್ಯರ್ಕ್ಕುಮವ್ ವಿರೋಧಿ ಕೈಂಕರ್ಯ ಹಾನಿ; ಅಪೇಕ್ಷಿತವುವ್ ಕೈಂಕರ್ಯ ವೃದ್ಧಿ.**

ಸಂಸಾರಿಗಳಿಗೆ ಶತ್ರುಪೀಡಾದಿಗಳು ವಿರೋಧಿಗಳು, ಅನ್ನಪಾನಾದಿಗಳು ಅಪೇಕ್ಷಿತಗಳು; ಮೋಕ್ಷದಲ್ಲಿ ಇಚ್ಛೆಯುಳ್ಳವರಿಗೆ ಸಂಸಾರ ಸಂಬಂಧವು ವಿರೋಧಿಯು, ಪರಮಪದ ಪ್ರಾಪ್ತಿಯು ಅಪೇಕ್ಷಿತವು; ಮತ್ತು ಮುಕ್ತರಿಗೂ, ನಿತ್ಯರಿಗೂ ಭಗವತ್ಕೈಂಕರ್ಯ ಹಾನಿಯು ವಿರೋಧಿಯು, ಭಗವತ್ಕೈಂಕರ್ಯ ವೃದ್ಧಿಯು ಅಪೇಕ್ಷಿತವು.

**39. ಈಶ್ವರನೈಯೊಳಿಂದವರ್ಗಳ್ ರಕ್ಷಕರ್ ಅಲ್ಲರೆನ್ನುಮಿಡುವುವ್ "ಪ್ರಪನ್ನ ಪರಿತ್ರಾಣ"ತ್ತಿಲೇಶೊನ್ನೋಮ್.**

ಪರಮಾತ್ಮನಲ್ಲದೆ ಬೇರೆ ಯಾರೂ ರಕ್ಷಕರಲ್ಲ ಎಂಬುದನ್ನು ಪ್ರಪನ್ನ ಪರಿತ್ರಾಣವೆಂಬ ಗ್ರಂಥದಲ್ಲಿ ಹೇಳಿದ್ದೇವೆ.

## ಅಕಾರವು ಶ್ರೀಯಃಪತಿತ್ವವನ್ನು ಪ್ರತಿಪಾದಿಸುವಿಕೆ

## (ಸೂತ್ರಗಳು 40 ರಿಂದ 47)

**40. ರಕ್ಷಿಕ್ಕುಂ ಪೋದು ಪಿರಾಟ್ಟಿ ಸನ್ನಿಧಿ ವೇಂಡುಗೈಯಾಲೆ ಇದಿಲೇ ಶ್ರೀ ಸಂಬಂಧಮುಂ ಅನುಸಂಧೇಯಮವ್.**

ರಕ್ಷಕನಾದ ಪರಮಾತ್ಮನು ಚೇತನರನ್ನು ರಕ್ಷಿಸುವಾಗ ಪುರುಷಕಾರ ಭೂತೆ

ಯಾದ ಶ್ರೀದೇವಿಯ ಸಂಬಂಧವು ಅವಶ್ಯಕವಾಗಿರುವುದರಿಂದ ಈ ಅ ಎಂಬ ಅಕ್ಷರದಲ್ಲಿ ಲಕ್ಷ್ಮೀ ದೇವಿಯ ಸಂಬಂಧವನ್ನೂ ಅನುಸಂಧಾನ ಮಾಡಬೇಕು. (ಅ=ಶ್ರೀಮನ್ನಾರಾಯಣ.)

**41. ಅತ್ರ ಭಗವತ್ಸೇನಾಪತಿಮಿಶ್ರರ್ ವಾಕ್ಯಮ್ "ಅವನ್ ಮಾರ್ವೈ ವಿಟ್ಟುಪ್ಪಿರಿಯಿಲ್ ಇವ್ವಕ್ಷರಮ್ ವಿಟ್ಟುಪ್ಪಿರಿವದು."**

ಈ ವಿಷಯದಲ್ಲಿ "ಅವನ್ ಮಾರ್ವೈ ವಿಟ್ಟುಪ್ಪಿರಿಯಿಲ್ ಇವ್ವಕ್ಷರಮ್ ವಿಟ್ಟುಪ್ಪಿರಿವದು" ಎಂಬ ಭಗವತ್ಸೇನಾಪತಿ ಮಿಶ್ರರ ವಾಕ್ಯವನ್ನು ಅಂದರೆ ಲಕ್ಷ್ಮಿಯು ಅವನ ಹೃದಯವನ್ನು ಬಿಟ್ಟು ಅಗಲಿದರೆ ಅವಳು ಈ 'ಅ' ಎಂಬ ಅಕ್ಷರವನ್ನು ಬಿಟ್ಟು ಅಗಲುವಳು ಎಂಬುದನ್ನು ಸ್ಮರಿಸ ತಕ್ಕದ್ದು. (ಎರಡೂ ಸಾಧ್ಯವಿಲ್ಲ ಎಂದು ಅರ್ಥ.)

**42. ಭರ್ತ್ತಾವಿನುಡೈಯ ಪಡುಕ್ಕೈಯೈಯುಮ್ ಪ್ರಜೈಯಿನುಡೈಯ ತೊಟ್ಟಿಲೈಯುಮ್ ವಿಡಾದೇ ಇರುಕ್ಕುಮ್ ಮಾತಾವೈಪ್ಪೋಲೇ ಪ್ರಥಮ ಚರಮ ಪದಂಗಳೈ ವಿಡಾದೇಯಿರುಕ್ಕುಮಿರುಪ್ಪು.**

ಪತಿಯ ಸಂಬಂಧವನ್ನೂ, ಮಗುವಿನ ಸಂಬಂಧವನ್ನೂ ಬಿಡದೆ ಇರುವ ತಾಯಿಯಂತೆ ಮೊದಲನೆಯ ಪದವಾದ ಅಕಾರವನ್ನೂ, ಕೊನೆಯ ಪದವಾದ ಮಕಾರವನ್ನೂ (ಪರಮಾತ್ಮನನ್ನೂ ಚೇತನನನ್ನೂ) ಬಿಡದೆ ಇರುವ ಇರುವಿಕೆಯು ಇವಳದು.

**43. ಶ್ರೀ ನಂದಗೋಪರೈಯುಮ್ ಕೃಷ್ಣನೈಯುಮ್ ವಿಡಾದ ಯಶೋದೈ ಪ್ಪಿರಾಟ್ಟಿಯೈ ಪ್ಪೋಲೇ.**

ಶ್ರೀ ನಂದಗೋಪನನ್ನೂ, ಕೃಷ್ಣನನ್ನೂ ಬಿಡದೆ ಇರುವ ಯಶೋದಾ ದೇವಿಯ ಹಾಗೆ (ಇದ್ದಾಳೆ).

**44. ಒರುವನಡಿಮೈಕೊಳ್ಳುಮ್ ಬೋದು ಗೃಹಿಣಿಕ್ಕೆನ್ರನ್ರೇ ಅವಣೈ-ಯೋಲೈ ಎಳುದುವದು; ಅಕಿಲುಮ್ ಪಣಿಶೆಯ್ವದು ಗೃಹಿಣಿಕ್ಕಿರೇ; ಅದು ಪ್ಪೋಲೇ ನಾಮ್ ಪಿರಾಟ್ಟಿಕ್ಕು ಅಡಿಮೈಯಾಯ್ ಇರುಕ್ಕುಂಬಡಿ.**

ಒಬ್ಬನು ಒಬ್ಬ ಸೇವಕನನ್ನು ಸೇವಾವೃತ್ತಿಗೆ ನೇಮಿಸಿಕೊಳ್ಳುವಾಗ ಗೃಹಿಣಿಗಾಗಿ ಎಂದು ಕೈಪತ್ರ ಬರೆಸಿಕೊಳ್ಳುವುದಿಲ್ಲ. ಆದಾಗ್ಯೂ

(ಸೇವಕನು) ಸೇವಾವೃತ್ತಿಯನ್ನು ಮಾಡುವುದು ಗೃಹಿಣಿಗೇ ಅಲ್ಲವೆ? ಅದೇ ರೀತಿ ನಾವು ಲಕ್ಷ್ಮಿಗೆ ದಾಸರಾಗಿದ್ದೇವೆ.

**45. ಆಗ ಪ್ಪಿರಿತ್ತು ನಿಲ್ಲೈಯಿಲ್ಲೈ.**

ಆದುದರಿಂದ (ಪರಮಾತ್ಮನಿಗೂ ಶ್ರೀದೇವಿಗೂ) ಒಬ್ಬರನ್ನೊಬ್ಬರು ಅಗಲಿರುವ ಪರಿಸ್ಥಿತಿಯು ಇಲ್ಲವು.

**46. ಪ್ರಭೈಯ್ಯೈಯುಮ್ ಪ್ರಭಾವಾನ್ಯೈಯುಮ್ ಪುಷ್ಪತ್ತೈಯುಮ್ ಮಣತ್ತೈಯುಮ್ ಪೋಲೆ.**

ಪ್ರಭೆಗೂ ಪ್ರಭೆಯುಳ್ಳ ವಸ್ತುವಿಗೂ, ಹೂವಿಗೂ ಅದರ ಪರಿಮಳಕ್ಕೂ ಇರುವ ಬೇರ್ಪಡಿಸಲಾಗದ ಸಂಬಂಧದಂತೆ (ಇದೆ).

**47. ಆಗ ಇಚ್ಚೇರ್ತ್ತಿ ಉದ್ದೇಶ್ಯಮಾಯ್‌ವಿಟ್ಟದು.**

ಆದ್ದರಿಂದ ಇವರಿಬ್ಬರ ಸೇರುವಿಕೆಯೇ ನಮಗೆ (ಶರಣಾಗತಿಗೂ ಕೈಂಕರ್ಯಕ್ಕೂ) ಉದ್ದೇಶವಾಗಿದೆ.

## ಅಕಾರದಲ್ಲಿ 'ಆಯ' ಎಂಬ ಲುಪ್ತ ಚತುರ್ಥಿ ವಿಭಕ್ತಿ ಪ್ರತ್ಯಯದಿಂದ ಶೇಷತ್ವ ಪ್ರತಿಪಾದನೆ (ಸೂತ್ರಗಳು 48 ರಿಂದ 57)

**48. ಇದಿಲೇ ಚತುರ್ಥಿಯೇರಿಕ್ಕಳಿಯುಮ್.**

ಈ ಅಕಾರದಲ್ಲಿ 'ಆಯ' ಎಂಬ ಚತುರ್ಥಿ ವಿಭಕ್ತಿ ಪ್ರತ್ಯಯವು ಮೊದಲು ಸೇರಿ ಅನಂತರ ಲೋಪ ಹೊಂದುತ್ತದೆ. (ಇದಕ್ಕೆ ಲುಪ್ತ ಚತುರ್ಥಿ ಎಂದು ಹೆಸರು.)

**49. ಚತುರ್ಥಿಯೇರಿನ ಪಡಿ ಎನ್ನೆನ್ನಿಲ್.**

ಅಕಾರದಲ್ಲಿ ಚತುರ್ಥಿ ವಿಭಕ್ತಿ ಪ್ರತ್ಯಯವು ಸೇರಿರುವುದು ಹೇಗೆಂದರೆ;

**50. ನಾರಾಯಣ ಪದತ್ತುಕ್ಕು ಸಂಗ್ರಹವಾಯಿರುಕ್ಕೈಯಾಲೇ.**

ಇದು (ಮುಂದೆ ಇರುವ) ನಾರಾಯಣ ಪದಕ್ಕೆ ಸಂಗ್ರಹವಾಗಿ ಇರುವುದರಿಂದ. (ಮುಂದೆ ನಾರಾಯಣ ಪದಕ್ಕೆ "ಆಯ" ಎಂಬ ಚತುರ್ಥಿ ವಿಭಕ್ತಿ ಸೇರಿ ನಾರಾಯಣಾಯ ಎಂದು ಆಗಿದೆ. ಆದ್ದರಿಂದ ನಾರಾಯಣ ಪದಕ್ಕೆ ಸಂಗ್ರಹವಾದ ಈ ಅಕಾರಕ್ಕೂ 'ಆಯ' ಎಂಬ ಚತುರ್ಥಿ ವಿಭಕ್ತಿಯು ಮೊದಲು ಸೇರಿ ಅನಂತರ ಲೋಪ ಹೊಂದುತ್ತದೆ.)

**51. ಇತ್ತಾಲ್ ಈಶ್ವರನುಕ್ಕು ಶೇಷಮೆನ್ಗಿರದು.**

ಈ ಆಯ ಎಂಬ ಲುಪ್ತ ಚತುರ್ಥಿ ಪ್ರತ್ಯಯದಿಂದ ಚೇತನನು ಪರಮಾತ್ಮನಿಗೆ ದಾಸನು ಎಂದು ಹೇಳಲ್ಪಡುತ್ತದೆ.

**52. ಶೇಷತ್ವಂ ದುಃಖರೂಪಮಾಗವನ್ರೋ ನಾಟ್ಟಿಲ್ ಕಾಣ್ಗಿರದೆನ್ನಿಲ್**

ಶೇಷತ್ವವು (ಇತರರಿಗೆ ದಾಸನಾಗಿ ಇರುವಿಕೆಯು) ಜಗತ್ತಿನಲ್ಲಿ ದುಃಖರೂಪವಾಗಿ ತೋರುತ್ತದೆಯಲ್ಲವೇ ಎಂದು ಹೇಳಿದರೆ:

**53 ಅಂದ ನಿಯಮಮಿಲ್ಲೈ: ಉಹಂದ ವಿಷಯತ್ತುಕ್ಕು ಶೇಷಮಾಯಿರುಕ್ಕುಮವ್ ಇರುಪ್ಪು ಸುಖಮಾಹ ಕಾಣ್ಗೈಯಾಲೆ.**

ಆ ನಿಯಮವಿಲ್ಲ. ಪ್ರೀತಿ ಗೌರವಗಳಿಗೆ ಪಾತ್ರರಾದವರಿಗೆ ದಾಸರಾಗಿ ಇರುವ ಪರಿಸ್ಥಿತಿಯು ಸುಖರೂಪವಾಗಿ ತೋರುತ್ತಿರುವುದರಿಂದ.

**54. ಅಕಾರತ್ತಿಲೇ ಕಲ್ಯಾಣಗುಣಂಗಳೈ ಶೊಲ್ಲುಕೈಯಾಲೆ ಇಂದ ಶೇಷತ್ವಮುಮವ್ ಗುಣಕೃತ್ತಾಲೆ ವಂದದು.**

ಅಕಾರದಲ್ಲಿ (ಪರಮಾತ್ಮನ) ಕಲ್ಯಾಣ ಗುಣಗಳನ್ನು ಹೇಳುವುದರಿಂದ ಈ ಪರಮಾತ್ಮ ಶೇಷತ್ವವೂ ಅವನ ಗುಣದಿಂದ ಉಂಟಾದುದಾಗಿದೆ.

**55. ಶೇಷತ್ವಮೋ ಆತ್ಮಾವುಕ್ಕು ಸ್ವರೂಪಂ.**

ಶೇಷತ್ವವೇ (ಪರಮಾತ್ಮನ ದಾಸತ್ವವೇ) ಚೇತನನಿಗೆ ಸ್ವರೂಪವು.

**56. ಶೇಷತ್ವಮ್ ಇಲ್ಲಾದ ಪೋದು ಸ್ವರೂಪಮಿಲ್ಲೈ.**

ಶೇಷತ್ವವು ಇಲ್ಲದೇ ಹೋದಾಗ ಚೇತನನಿಗೆ ಸ್ವರೂಪ ನಾಶವಾಗುತ್ತದೆ.

**57. ಆತ್ಮಾಪಹಾರಮಾವದು ಸ್ವತಂತ್ರನೆನ್ನಿರ ನಿನೈವು; ಸ್ವತಂತ್ರ-ಮಾಂಬೋದು ಇಲ್ಲೈಯಾಯ್ವಿಡುಮ್.**

ತಾನು ಸ್ವತಂತ್ರನೆಂದು ನೆನೆಯುವುದೇ ಆತ್ಮಾಪಹಾರವು. 'ನಾನು ಸ್ವತಂತ್ರನು' ಎಂಬ ಜ್ಞಾನವುಂಟಾದರೆ ಚೇತನನ ಸ್ವರೂಪವೇ ನಾಶವಾಗಿ ಬಿಡುತ್ತದೆ.

## ಉಕಾರಾರ್ಥ ಪ್ರತಿಪಾದನೆ
## (ಸೂತ್ರಗಳು 58 ರಿಂದ 65)

**58. ಸ್ಥಾನ ಪ್ರಮಾಣತ್ತಾಲೆ "ಉ" ಕಾರಮವಧಾರಣಾರ್ಥಮ್.**

ಸ್ಥಾನ ಪ್ರಮಾಣದಿಂದ (ಏವಕಾರ ಸ್ಥಾನದಲ್ಲಿ ಉಕಾರ ಪ್ರಯೋಗ ವುಂಟಾಗುವುದರಿಂದ) ಉ ಎಂಬ ಅಕ್ಷರವು "ಏವ" ಎಂಬ ಅವಧಾರಣಾರ್ಥ ವನ್ನು ತಿಳಿಸುತ್ತದೆ. (ಅಂದರೆ ಅವನಿಗೇ ಎಂದು ಅರ್ಥವು.)

**59. ಇತ್ತಾಲ್ ಪಿರರ್ಕ್ಕು ಶೇಷಮನ್ರು ಎನ್ಗಿರದು.**

ಈ ಉಕಾರದಿಂದ (ಚೇತನನು) ಇತರರಿಗೆ ಶೇಷಭೂತನಲ್ಲ ಎಂಬುದು ತಿಳಿಸಲ್ಪಟ್ಟಿದೆ. (ಅನ್ಯ ಶೇಷತ್ವ ನಿವೃತ್ತಿಯು ಹೇಳಲ್ಪಟ್ಟಿದೆ.)

**60. ಪೆರಿಯ ಪಿರಾಟ್ಟಿಯಾರ್ಕ್ಕು ಶೇಷನೆನ್ಗಿರದು ಎನ್ರುಮ್ ಶೊಲ್ಲುವರ್ಗಳ್.**

ಉಕಾರವು (ಉಕಾರೇಣೋಚ್ಯತೇ ಲಕ್ಷ್ಮೀ ಎಂದು) ಲಕ್ಷ್ಮೀ ವಾಚಕ ವಾಗಿರುವುದರಿಂದ ಕೆಲವರು ಲಕ್ಷ್ಮೀದೇವಿಗೆ ಆತ್ಮನು ಶೇಷನೆಂದು ಉಕಾರವು ತಿಳಿಸುತ್ತದೆ ಎಂದೂ ಹೇಳುವರು.

**61. ಅದಿಲುಮ್ ಅನ್ಯಶೇಷತ್ವತ್ತೈ ಕಳಿಗೈಯೇ ಪ್ರಧಾನಮ್.**

ಆದರೆ ಹಾಗೆ ಹೇಳುವುದಕ್ಕಿಂತ (ಆತ್ಮನು) ಭಗವಂತನಲ್ಲದೆ ಇತರರಾರಿಗೂ ಶೇಷಭೂತನಲ್ಲ ಎಂದು ಹೇಳುವುದೇ ಉಕಾರದ ಪ್ರಧಾನವಾದ ಅರ್ಥವು.

**62. ದೇವರ್‌ಗಳುಕ್ಕು ಶೇಷಮಾನ ಪುರೋಡಾಶತ್ತೈ ನಾಯಿಕ್ಕು ಇಡುಮಾಪ್ಪೋಲೇ ಈಶ್ವರ ಶೇಷಮಾನ ಆತ್ಮವಸ್ತುವೈ ಸಂಸಾರಿಗಳುಕ್ಕು ಶೇಷಮಾಕ್ಕುಗೈ.**

ಪರಮಾತ್ಮನ ಸ್ವತ್ತಾಗಿ ಅಧೀನವಾಗಿರುವ ಆತ್ಮವಸ್ತುವನ್ನು ಸಂಸಾರಿಗಳಿಗೆ ದಾಸನಾಗಿ ಮಾಡುವುದು ಇಂದ್ರಾದಿ ದೇವತೆಗಳಿಗಾಗಿ ಇರುವ ಹವಿಸ್ಸನ್ನು ನಾಯಿಗೆ ಇಡುವಂತೆ ಆಗುತ್ತದೆ.

**63. ಭಗವತ್‌ಶೇಷತ್ತ್ವತ್ತಿಲುಮ್ ಅನ್ಯಶೇಷತ್ವಮ್ ಕಳಿಗೈಯೇ ಪ್ರಧಾನಮ್.**

ಭಗವಂತನಿಗೆ ದಾಸನಾಗಿ ಇರುವುದಕ್ಕಿಂತಲೂ ಇತರರಿಗೆ ದಾಸನಾಗದೇ ಇರುವುದೇ (ಆತ್ಮನಿಗೆ) ಮುಖ್ಯವಾದುದು.

**64. "ಮರಂದುಂ ಪುರಂದೊಳಾಮಾಂದರ್" ಎನ್‌ಗೈಯಾಲೆ.**

"ಮರನ್ದುಂ ಪುರನ್ದೊಳಾ ಮಾನ್ದರ್"—ಅಂದರೆ "ಭಗವನ್ನಾಮವನ್ನು ಮರೆತರೂ, ಇತರರ ಸೇವೆಯನ್ನು ಮಾಡದವರಾಗಿದ್ದಾರೆ"—ಎಂದು ನಾನ್‌ಮುಹನ್ ತಿರುವಂದಾದಿಯ (68) ಪಾಶುರದಲ್ಲಿ ತಿರುಮಳಿಶೈ ಆಳ್ವಾರ್ ಹೇಳಿರುವಂತೆ.

**65. ಇತ್ತಾಲ್ ತನಕ್ಕುಮ್ ಪಿರರ್ಕ್ಕುಮ್ ಉರಿತ್ತನ್ರೆನ್ಗಿರದು.**

ಈ ಉಕಾರದಿಂದ ತಾನು ತನಗೂ ಮತ್ತು ಇತರರಿಗೂ ದಾಸನಲ್ಲ ಎಂಬುದು ತಿಳಿಸಲ್ಪಟ್ಟಿದೆ.

# ಮಕಾರಾರ್ಥ ಪ್ರತಿಪಾದನೆ
## (ಸೂತ್ರಗಳು 66 ರಿಂದ 71)

**66. "ಮ" ಕಾರಮ್ ಇರಪ್ಪತ್ತಂಜಾಮ್ ಅಕ್ಷರಮಾಯ್ ಜ್ಞಾನ ವಾಚಿಯುಮಾಯ್ ಇರುಕ್ಕೈಯಾಲೆ "ಆತ್ಮಾವೈ" ಶೊಲ್ಲುಗಿರದು.**

ಮಕಾರವು 25ನೆಯ ಅಕ್ಷರವಾಗಿ, ಜ್ಞಾನವಾಚಕವಾಗಿ ಇರುವುದರಿಂದ ಜ್ಞಾನ ಸ್ವರೂಪನೂ, ಜ್ಞಾನ ಗುಣಕನೂ ಆದ ಆತ್ಮನನ್ನು ತಿಳಿಸುತ್ತದೆ.

**67. ಇದು ತಾನ್ ಸಮಷ್ಟಿವಾಚಕಮ್.**

ಈ ಮಕಾರವು ಆತ್ಮ ಸಮುದಾಯಕ್ಕೆಲ್ಲಾ ವಾಚಕವಾಗಿದೆ.

**68. ಜಾತ್ಯೇಕ ವಚನಮ್.**

ಆತ್ಮ ಜಾತಿಪರವಾದ ಏಕ ವಚನವಾಗಿದೆ.

**69. ಇತ್ತಾಲ್ ಆತ್ಮಾ ಜ್ಞಾತಾವೆನ್ರು ದೇಹತ್ತಿಲ್ ವ್ಯಾವೃತ್ತಿ ಶೊಲ್ಲಿತ್ತಾಯಿತ್ತು.**

ಈ ಮಕಾರದಿಂದ ಆತ್ಮನು ಜ್ಞಾನಸ್ವರೂಪನು, ಮತ್ತು ಜ್ಞಾನಾಶ್ರಯನು ಎಂದೂ, ಆದ್ದರಿಂದ (ಜ್ಞಾನ ರಹಿತವಾದ) ದೇಹಕ್ಕಿಂತ ಬೇರ್ಪಟ್ಟವನು ಎಂದೂ ತಿಳಿಸಲ್ಪಟ್ಟಿದೆ.

**70. ದೇಹತ್ತಿಲ್ ವ್ಯಾವೃತ್ತಿ "ತತ್ವಶೇಖರ"ತ್ತಿಲೇ ಶೊನ್ನೋಮ್.**

ಆತ್ಮನು ದೇಹಕ್ಕಿಂತ ಬೇರೆಯಾದವನು ಎಂಬುವನ್ನು ತತ್ವಶೇಖರ ಎಂಬ ಗ್ರಂಥದಲ್ಲಿ ತಿಳಿಸಿದೆ.

**71. ಮಣತ್ತೈಯುಮ್ ಒಳಿಯೈಯುಮ್ ಕೊಂಗು ಪೂವೈಯುಮ್ ರತ್ನತ್ತೈಯುಮ್ ವಿಡುಂಬುವಾಪೋಲೇ ಶೇಷಮೆನ್ರು ಆತ್ಮಾವೈ**

**ಆದರಿಕ್ಕಿರದು; ಅಲ್ಲಾದುಪ್ಪೋದು "ಉಯಿರಿನಾಲ್ ಕುರ್ರೈ-ವಿಲವನ್" ಎನ್ಗಿರಪಡಿಯೇ ತ್ಯಾಜ್ಯವನ್. ಅದು ತೋನ್ರ ಶೇಷತ್ವತ್ತೈ ಚೊಲ್ಲಿ ಪಿನ್ನೈ ಆತ್ಮಾವೈಚ್ಚೊಲ್ಲುಗಿರದು.**

ವಾಸನೆಯನ್ನು ನೋಡಿ ಹೂವನ್ನೂ. ಪ್ರಕಾಶವನ್ನು ನೋಡಿ ರತ್ನವನ್ನೂ ಆಸೆಪಡುವಂತೆ, ಭಗವಂತನದಾಸನು ಎಂದು ಆತ್ಮನು ಆದರಿಸಲ್ಪಡುತ್ತಾನೆ. ಹಾಗಿಲ್ಲದಿದ್ದರೆ (ಭಗವಂತನಿಗೆ ದಾಸನಾಗಿಲ್ಲದಿದ್ದರೆ) "ಉಯಿರಿ-ನಾಲ್ ಕುರ್ರೈವಿಲವನ್" ಎಂದು ತಿರುವಾಯ್ಮೊಳಿ (4–8–10)ಪಾಶುರದಲ್ಲಿ ಹೇಳಿರುವಂತೆ ಭಗವಂತನಿಗೆ ಶೇಷಭೂತನಾಗಿಲ್ಲದ ಆತ್ಮನು ತ್ಯಾಜ್ಯನಾಗುವನು. ಹೀಗಿರುವುದರಿಂದಲೇ ಶೇಷತ್ವವನ್ನು ಮೊದಲು (ಅಕಾರದಲ್ಲಿ) ತಿಳಿಸಿ ಅನಂತರ ಆತ್ಮನನ್ನು (ಮಕಾರದಲ್ಲಿ) ತಿಳಿಸಿದೆ.

## ಪ್ರಣವದ ಒಟ್ಟು ತಾತ್ಪರ್ಯಾರ್ಥ
## (ಸೂತ್ರಗಳು 72 ರಿಂದ 74)

**72. ಆಗ ಪ್ರಣವತ್ತಾಲ್ — "ಕಣ್ಣಪುರ ನೊನ್ರುಡೈಯಾನುಕ್ಕು ಅಡಿಯೇನ್ ಒರುವರ್ಕ್ಕುರಿಯೇನೋ" ಎನ್ಗಿರ ಪಡಿಯೇ ಜೀವಪರ ಸಂಬಂಧವನ್ ಶೊಲ್ಲಿತ್ತು.**

ಆದ್ದರಿಂದ ಪ್ರಣವದಿಂದ "ಕಣ್ಣಪುರ ಮೊನ್ರುಡೈಯಾನುಕ್ಕಡಿಯೇನ್ ಒರುವರ್ಕ್ಕುರಿಯೇನೋ"ಅಂದರೆ ಪರಮಾತ್ಮನಿಗೇ ನಾನು ಶೇಷಭೂತನು ಬೇರೆ ಯಾರಿಗೂ ಅಲ್ಲ ಎಂಬ ತಿರುಮಂಗೈ ಆಳ್ವಾರವರ ಪೆರಿಯತಿರು-ಮೊಳಿ (8–9–3) ಪಾಶುರದಂತೆ ಜೀವ ಪರಮಾತ್ಮರುಗಳ ಶೇಷಶೇಷಿ ಭಾವದ (ದಾಸತ್ವ ಸ್ವಾಮಿತ್ವದ) ಸಂಬಂಧವು ಹೇಳಲ್ಪಟ್ಟಿತು.

**73. ಇತ್ತಾಲ್ "ತಾಮರೈಯಾಳ್ ಕೇಳ್ವನ್ ಒರುವನ್ನೈಯೇ ನೋಕ್ಕು ಮುಣರ್ವು" ಎನ್ರದಾಯಿತ್ತು.**

ಈ ಪ್ರಣವದಿಂದ "ತಾಮರೈಯಾಳ್ ಕೇಳ್ವನ್ ಒರುವನ್ನೈಯೇ ನೋಕ್ಕು ಮುಣರ್ವು"—ಅಂದರೆ ಶ್ರೀಯಃಪತಿಯಾದ ಪರಮಾತ್ಮನೊಬ್ಬನನ್ನೇ

ಜೀವನು ಆಶ್ರಯಿಸುತ್ತಾನೆ ಎಂಬ ಪೊಯ್ ಹೈ ಆಳ್ವಾರ್ರವರ ಮೊದಲ ತಿರುವಂದಾದಿ (67) ಪಾಶುರದಲ್ಲಿ ಹೇಳಿರುವಂತೆ ಜೀವಾತ್ಮ ಪರಮಾತ್ಮರ ಸಂಬಂಧವು ಹೇಳಲ್ಪಟ್ಟಿದೆ.

**74. ಅಕಾರತ್ತಾಲುಂ ಮಕಾರತ್ತಾಲುಂ ರಕ್ಷಕನೈಯುಂ ರಕ್ಷ್ಯತ್ತೈಯುಂ ಶೊಲ್ಲಿತ್ತು; ಚತುರ್ಥಿಯಾಲುಂ ಉ-ಕಾರತ್ತಾಲುಂ ರಕ್ಷಣ ಹೇತುವಾನ ಪ್ರಾಪ್ತಿಯೈಯುಂ ಫಲತ್ತೈಯುಂ ಶೊಲ್ಲಿತ್ತು.**

ಆಕಾರದಿಂದಲೂ, ಮಕಾರದಿಂದಲೂ ರಕ್ಷಕನೂ ರಕ್ಷಿಸಲ್ಪಡುವವನೂ (ಅಂದರೆ ಪರಮಾತ್ಮನೂ, ಜೀವಾತ್ಮನೂ) ಹೇಳಲ್ಪಟ್ಟಿದ್ದಾರೆ. 'ಆಯ' ಎಂಬ ಚತುರ್ಥಿಯಿಂದಲೂ, ಉಕಾರದಿಂದಲೂ ರಕ್ಷಣೆಗೆ ಕಾರಣವಾದ ಪ್ರಾಪ್ತಿಯೂ (ಅಂದರೆ ಶೇಷತ್ವವೆಂಬ ಸಂಬಂಧವೂ), ಜೀವಾತ್ಮನು ಪರಮಾತ್ಮನಿಗೇ ದಾಸನಾಗಿ, ಅವನಿಗೇ ಕೈಂಕರ್ಯ ಮಾಡುವವನಾಗಿದ್ದಾನೆ ಎಂಬ ಆವನ ರಕ್ಷಣೆಗೆ ಫಲವೂ ಹೇಳಲ್ಪಟ್ಟಿದೆ.

## ನಮಃ ಎಂಬ ಎರಡನೆಯ ಪದದ ಅರ್ಥಪ್ರತಿಪಾದನೆ (ಸೂತ್ರಗಳು 75 ರಿಂದ 95)

**75. ಇನಿಮೇಲ್ ಪ್ರಣವತ್ತೈ ವಿವರಿಕ್ಕಿರದು.**

ಇನ್ನು ಮುಂದೆ ಈ ಮಂತ್ರದ ಮುಂದಿನ ಎರಡು ಪದಗಳೂ ಮೊದಲನೆಯ ಪದವಾದ ಪ್ರಣವದ ಅರ್ಥವನ್ನು ವಿವರಿಸುತ್ತವೆ.

**76. ಉಕಾರತ್ತೈ ವಿವರಿಕ್ಕಿರದು ನಮಸ್ಸು; ಅಕಾರತ್ತೈ ವಿವರಿಕ್ಕಿರದು ನಾರಾಯಣ ಪದಮ್; ಮಕಾರತ್ತೈ ವಿವರಿಕ್ಕಿರದು ಚತುರ್ಥೀ, ಸಾರಪದಮೆನ್ರುಮ್ ಶೊಲ್ಲುವರ್‌ಗಳ್.**

ಉಕಾರವನ್ನು ವಿವರಿಸುವುದು ನಮಃ ಎಂಬ ಪದವು; ಅಕಾರವನ್ನು

ವಿವರಿಸುವುದು "ನಾರಾಯಣ" ಎಂಬ ಪದವು; ಮಕಾರವನ್ನು ವಿವರಿಸುವುದು 'ಆಯ' ಎಂಬ ಚತುರ್ಥಿ ಮತ್ತು 'ನಾರ' ಎಂಬ ಪದವು ಎಂದು ತಿಳಿಸಿದ್ದಾರೆ.

**77. ಅಡ್ವೈವೇ ವಿವರಿಯಾದೊಳಿಗಿರದು ವಿರೋಧಿ ಪೋಯ್ ಅನುಭವಿಕ್ಕ ವೇಂಡುಗೈಯಾಲೆ.**

ಪ್ರಣವದ ಅಕ್ಷರಗಳನ್ನು ಕ್ರಮದಲ್ಲಿ ವಿವರಿಸದೇ ಇರುವುದು (ಅ–ಉ–ಮ ಎಂಬ ಕ್ರಮವನ್ನು ಬಿಟ್ಟು ಮೊದಲು ಉಕಾರವನ್ನು ಅಂದರೆ ನಮಸ್ಸನ್ನು ಹೇಳಿ ಅನಂತರ ಅಕಾರವನ್ನು ಅಂದರೆ ನಾರಾಯಣ ಪದವನ್ನು ಹೇಳಿರುವುದು) ಏತಕ್ಕೆಂದರೆ ಮೊದಲು ಉಕಾರದಿಂದ ಅಹಂಕಾರಮಮಕಾರಾದಿಗಳನ್ನು ಹೋಗಲಾಡಿಸಿಕೊಂಡು ಅನಂತರ ಅಕಾರವಾಚ್ಯನಾದ ಪರಮಾತ್ಮನ ಅನುಭವವನ್ನು ಪಡೆಯಬೇಕಾಗಿರುವುದರಿಂದ.

**78. ನಮಸ್ಸು "ನ" ಎನ್ರುಮ್ "ಮಃ" ಎನ್ರುಮ್ ಇರಂಡು ಪದಮ್.**

ನಮಸ್ಸು 'ನ' ಎಂದೂ 'ಮಃ' ಎಂದೂ ಎರಡು ಪದಗಳಾಗಿವೆ. (ನಮಃ ಎಂಬ ಪದವನ್ನು ಒಂದೇ ಪದವಾಗಿಯೂ, ಎರಡು ಪದಗಳಾಗಿ ಬಿಡಿಸಿಯೂ, ಅರ್ಥ ಮಾಡಬಹುದು. ಇಲ್ಲಿ ಅದನ್ನು 'ನ, ಮಃ' ಎಂದು ಎರಡು ಪದಗಳಾಗಿ ಬಿಡಿಸಿ ಹೇಳಿದ್ದಾರೆ.)

**79. ಮಃ ಎನ್ಗಿರವಿತ್ತಾಲ್ "ತನಕ್ಕುರಿಯನ್" ಎನ್ಗಿರದು. "ನ" ಎನ್ರು ಅತ್ತೈ ತ್ತವಿರ್ಕ್ಕಿರದು.**

'ಮಃ' ಎಂದರೆ ನನಗೆ ನಾನು ಸ್ವತಂತ್ರನು ಎಂದು ಅರ್ಥ. 'ನ' ಎಂದರೆ ಅದು ಅಲ್ಲ ಎಂದು ಅದನ್ನು ನಿರಾಕರಿಸುವುದು.

**80. ಆಗ "ನಮಃ" ಎನ್ಗಿರವಿತ್ತಾಲ್ ತನಕ್ಕುರಿಯನನ್ರೆನ್ಗಿರದು.**

ಆದ್ದರಿಂದ 'ನಮಃ' ಎಂದರೆ ನನಗೆ ನಾನು ಸ್ವತಂತ್ರನಲ್ಲ ಎಂದು ಅರ್ಥವು.

**81. ಪಿರರ್ಕ್ಕುರಿಯನಾನವನ್ರು ತನ್ ವೈಲಕ್ಷಣ್ಯತ್ತೈ ಕ್ಕಾಟ್ಟಿ ನಿಱ್ಕಿಲಾಮ್; ತನಕ್ಕೆನ್ನುಮನ್ರು ಯೋಗ್ಯತೈಯುಮ್ ಕೂಡವಳಿಯುಮ್.**

ಇತರರಿಗೆ ನಾನು ದಾಸನು ಎಂಬ ಜ್ಞಾನವುಂಟಾದರೆ ಅವರಿಗಿಂತ ಮೇಲಾದ ತನ್ನ (ಪರಮಾತ್ಮನ) ಹಿರಿಮೆಯನ್ನು ತೋರಿಸಿ ಆ ಜ್ಞಾನವನ್ನು ಹೋಗಲಾಡಿಸಬಹುದು. ನನಗೆ ನಾನು ಸ್ವತಂತ್ರನು ಎಂಬ (ಅಹಂ-ಮೆ) ಜ್ಞಾನವುಂಟಾದರೆ ಅದನ್ನು ಹೋಗಲಾಡಿಸಿ ರಕ್ಷಿಸಲು ಸಾಮರ್ಥ್ಯವೂ ಇಲ್ಲವಾಗುತ್ತದೆ.

82. **ಇತ್ತಾಲ್ ವಿರೋಧಿಯೈ ಕ್ಕಳಿಕ್ಕಿರದು.**

ಈ ನಮಸ್ಸಿನಿಂದ ವಿರೋಧಿ ನಿರಸನವಾಗುತ್ತದೆ.

83. **ವಿರೋಧಿ ತಾನ್ ಮೂನ್ರು.**

ವಿರೋಧಿಗಳು ಮೂರು ಬಗೆಯಾಗಿವೆ.

84. **ಅದಾವದು ಸ್ವರೂಪ ವಿರೋಧಿಯುಂವಮ್, ಉಪಾಯ ವಿರೋಧಿಯುಂವಮ್, ಪ್ರಾಪ್ಯ ವಿರೋಧಿಯುಂವಮ್.**

ಅವು ಯಾವುವೆಂದರೆ ಸ್ವರೂಪ ವಿರೋಧಿಯು, ಉಪಾಯ ವಿರೋಧಿಯು ಪ್ರಾಪ್ಯ (ಪುರುಷಾರ್ಥ) ವಿರೋಧಿಯು.

85. **ಸ್ವರೂಪ ವಿರೋಧಿ ಕಳಿಗೈಯಾವದು "ಯಾನೇನೀಯೆನ್ನು-ಡೈಮೈಯುಂವಮ್ ನೀಯೇ" ಎನ್ರಿರುಕ್ಕೈ; ಉಪಾಯ ವಿರೋಧಿ ಕಳಿಗೈಯಾವದು "ಕಳೈವಾಯ್‌ತುನ್ಬಮ್ ಕಳೈಯಾದೊಳಿ-ವಾಯ್ ಕಳೈಕಣ್ ಮತ್ತಿಲೇನ್" ಎನ್ರಿರುಕ್ಕೈ; ಪ್ರಾಪ್ಯ ವಿರೋಧಿ ಕಳಿಗೈಯಾವದು "ಮತ್ತೈನಂ ಕಾಮಂಗಳ್ ಮಾಟ್ರು" ಎನ್ರಿರುಕ್ಕೈ.**

ಸ್ವರೂಪ ವಿರೋಧಿನಿರಸನವು ಏನೆಂದರೆ "ಯಾನೇನೀಯೆನ್ನುಡೈ-ಮೈಯುಮ್ ನೀಯೇ" ಎಂಬ ತಿರುವಾಯ್ಮೊಳಿಯ (2–9–9) ಪಾಶುರದಲ್ಲಿ ತಿಳಿಸಿರುವಂತೆ ನಾನೂ ನನಗೆ ಸೇರಿದವುಗಳೂ ಎಲ್ಲವೂ ನಿನ್ನದೇ; ನನ್ನದಲ್ಲ ಎಂದು ಇರುವುದು. (ಅಂದರೆ ನಾನು ಎಂಬ ಅಹಂಕಾರ ನನ್ನದು ಎಂಬ ಮಮಕಾರ ನಿವೃತ್ತಿಯೇ ಚೇತನನ ಶೇಷತ್ವವೆಂಬ ಸ್ವರೂಪದ ವಿರೋಧಿ ನಿರಸನವು. ಇದು 'ಓಂ-ಮಃ-ನ' ಎಂದು ಅನುಸಂಧಾನ ಮಾಡುವುದರಿಂದ ಉಂಟಾಗುತ್ತದೆ.)

ಉಪಾಯ ವಿರೋಧಿ ನಿರಸನವು ಏನೆಂದರೆ "ಕಳೈವಾಯ್‌ತುನ್ಬಮ್ ಕಳೈಯಾದೊಳಿವಾಯ್ ಕಳೈಕಣ್ ಮಟ್ರಿಲೇನ್" ಎಂದು ತಿರುವಾಯ್ಮೊಳಿಯು (5-8-8) ಪಾಶುರದಲ್ಲಿ ಹೇಳಿರುವಂತೆ ಅಂದರೆ ನೀನು ನನ್ನ ದುಃಖಗಳನ್ನು ಹೋಗಲಾಡಿಸಿದರೂ, ಹೋಗಲಾಡಿಸದೆ ಇದ್ದರೂ ನಿನ್ನನ್ನು ಬಿಟ್ಟು ನನಗೆ ಬೇರೆ ಯಾರೂ ರಕ್ಷಕರಿಲ್ಲ ಎಂದು ಇರುವುದು. (ಅಂದರೆ ನನಗೆ ನಾನೇ ರಕ್ಷಕನು ಎಂದು ಸ್ವರಕ್ಷಣಾಕಾರ್ಯದಲ್ಲಿ ಸ್ವಪ್ರವೃತ್ತಿ ಹೊಂದದೆ ನನಗೆ ನಾನು ರಕ್ಷಕನಲ್ಲ; ನೀನೇ ನನ್ನನ್ನು ರಕ್ಷಿಸಬೇಕೆಂದು ಪರಮಾತ್ಮನಿಗೆ ಶರಣನಾಗಿ ನಮಸ್ಕರಿಸುವುದೇ ಉಪಾಯವಿರೋಧಿ ನಿರಸನವು. ಇದು "ನಮೋ-ಮಃ-ನ" ಎಂದು ಅನುಸಂಧಾನ ಮಾಡುವುದರಿಂದ ಉಂಟಾಗುತ್ತದೆ.)

ಪುರುಷಾರ್ಥ ವಿರೋಧಿ ನಿರಸನವು ಏನೆಂದರೆ "ಮಟ್ರೈನಂ ಕಾಮಂಗಳ್ ಮಾಟ್ರು" ಎಂಬ ಗೋದಾದೇವಿಯು ತಿರುಪ್ಪಾವೈಯು 29ನೇ ಪಾಶುರದಲ್ಲಿ ತಿಳಿಸಿರುವಂತೆ ನಿನಗೇ ನಾವು ಕೈಂಕರ್ಯ ಮಾಡಬೇಕು; ಹಾಗೆ ಮಾಡದಂತೆ ತಡೆಯುವ ನಮ್ಮ ಸ್ವಾರ್ಥ ಆಸೆಗಳನ್ನೂ, ನಿನ್ನ ಕೈಂಕರ್ಯದಲ್ಲಿ ಉಂಟಾಗುವ ಸ್ವ-ಭೋಗ್ಯತ್ವ ಬುದ್ಧಿಯನ್ನೂ ಮಾರ್ಪಡಿಸು ಎಂದು ಇರುವುದು. (ಅಂದರೆ ಕರ್ಮಗಳಲ್ಲಿ ಸ್ವ-ಭೋಗ್ಯತ್ವ ಬುದ್ಧಿಯನ್ನು ಹೊಂದದೆ ಅವುಗಳು ಪರಮಾತ್ಮನ ಪವಿತ್ರ ಕೈಂಕರ್ಯಗಳೆಂಬ ಭಾವನೆ ಹೊಂದಿ ಸ್ವಾರ್ಥ ರಹಿತನಾಗಿ ಕರ್ಮಗಳನ್ನು ಅವನ ಆನಂದಕ್ಕಾಗಿ ಮಾಡುವುದೇ ಪುರುಷಾರ್ಥ ವಿರೋಧಿ ನಿರಸನವು. ಇದು ನಾರಾಯಣಾಯ—ಮಃ—ನ' ಎಂದು ಅನುಸಂಧಾನ ಮಾಡುವುದರಿಂದ ಉಂಟಾಗುತ್ತದೆ.)

**86. "ಮಃ" ಎನ್‌ಗೈ ಸ್ವರೂಪನಾಶವುಮ್; "ನಮಃ" ಎನ್‌ಗೈ ಸ್ವರೂಪೋಜ್ಜೀವನಮ್.**

"ಮಃ" (ನಾನು, ನನ್ನದು) ಎಂದರೆ ಸ್ವರೂಪ ನಾಶವು; ನಮಃ (ಯಾವುದೂ ನನ್ನದಲ್ಲ, ನಾನೂ ನನಗಾಗಿ ಅಲ್ಲ) ಎಂದರೆ ಸ್ವರೂಪೋಜ್ಜೀವನವು.

**87. ಇದು ತಾನ್ ಸ್ವರೂಪತ್ತೈಯುಮ್ ಉಪಾಯತ್ತೈಯುಮ್ ಫಲತ್ತೈಯುಮ್ ಕಾಟ್ಟುಮ್.**

ಈ ನಮಸ್ಸು (ನಮಃ ಎಂದು ಒಂದೇ ಪದವಾಗಿ ಹೇಳಿದರೆ) ಸ್ವರೂಪವನ್ನೂ, ಉಪಾಯವನ್ನೂ, ಫಲವನ್ನೂ, ಪ್ರಕಾಶಪಡಿಸುತ್ತದೆ.

**88. "ತೊಲೈವಿಲ್ಲಿ ಮಂಗಲಮ್ ತೊಳುಮ್" ಎನ್ಗೈಯಾಲೆ ಸ್ವರೂಪಮ್ ಶೊಲ್ಲಿತ್ತು; "ವೇಂಗಡತ್ತುರೈವಾರ್ಕ್ಕು ನಮಃ" ಎನ್ಗೈಯಾಲೆ ಉಪಾಯಮ್ ಶೊಲ್ಲಿತ್ತು; "ಅನ್ದಿತೊಳುಮ್ ಶೊಲ್" ಎನ್ಗೈಯಾಲೆ ಫಲಮ್ ಶೊಲ್ಲಿತ್ತು.**

"ತೊಲೈವಿಲ್ಲಿ ಮಂಗಲಮ್ ತೊಳುಮ್" ಎಂದರೆ ಪರಮಾತ್ಮನ ದೇವ ಸ್ಥಾನವು ಇರುವ ತೊಲೈವಿಲ್ಲಿ ಮಂಗಲಕ್ಕೆ ನಮಸ್ಕಾರವು ಎಂದು ಹೇಳುವ ತಿರುವಾಯ್ಮೊಳಿಯ (6–6–1) ಪಾಶುರದಲ್ಲಿ ನಮಸ್ಕಾರವನ್ನು ತಿಳಿಸುವ ತೊಳುಂ ಎಂಬ ಪದವು ಚೇತನನಿಂದ ನಮಸ್ಕರಿಸಲ್ಪಡುವ ಪರಮಾತ್ಮನ ಶೇಷತ್ವ ಸ್ವರೂಪವನ್ನು ತಿಳಿಸುತ್ತದೆ. (ಓಂ ನಮಃ—ಶೇಷಿಯಾದ ಪರಮಾತ್ಮನಿಗೆ ಶೇಷಭೂತನಾದ ನಾನು ನಮಸ್ಕರಿಸುತ್ತೇನೆ ಎಂದು ನಮಸ್ಸು ಚೇತನನ ಶೇಷತ್ವ ಸ್ವರೂಪವನ್ನು ಪ್ರಕಾಶಪಡಿಸುತ್ತದೆ.)

"ವೇಂಗಡತ್ತುರೈವಾರ್ಕ್ಕು ನಮಃ" ಅಂದರೆ ವೆಂಕಟಗಿರಿಯಲ್ಲಿರುವ ಪರಮಾತ್ಮನಿಗೆ ನಮಸ್ಕಾರವೆಂದು ಹೇಳುವ ತಿರುವಾಯ್ಮೊಳಿಯ (3–3–6) ಪಾಶುರವು ಉಪಾಯ ನಿಷ್ಠೆಯನ್ನು ತಿಳಿಸುವ ಪಾಶುರವಾಗಿ ಇರುವುದರಿಂದ ಇಲ್ಲಿ ನಮಃ ಎಂಬ ಪದವು ಉಪಾಯ ನಿಷ್ಠೆಯನ್ನು ತಿಳಿಸುತ್ತದೆ. (ನಮೋನಮಃ—ನನ್ನನ್ನು ರಕ್ಷಿಸು ಎಂದು ಮತ್ತೆ ಮತ್ತೆ ನಿನಗೆ ನಮಸ್ಕರಿಸುತ್ತೇನೆ ಎಂದು ನಮಸ್ಸು ಉಪಾಯವನ್ನು ಪ್ರಕಾಶ ಪಡಿಸುತ್ತದೆ.)

"ಅನ್ದಿತೊಳುಮ್ ಶೊಲ್" ಎಂಬ ತಿರುವಾಯ್ಮೊಳಿಯ (10–8–7) ಪಾಶುರದಲ್ಲಿ ಆಳ್ವಾರ್ರಿಗೆ ಕೈಂಕರ್ಯ ರಸವು ಅಧಿಕವಾಗಿ 'ಅನ್ದಿ ತೊಳುಮ್ ಶೊಲ್ ಪೆಟ್ರೇನ್' ಅಂದರೆ (ಪರಮಾತ್ಮನಿಗೆ) ನಮಸ್ಕಾರ ಎಂದು ಹೇಳುವುದನ್ನು ಕಲಿತೆನು ಎಂದು ಅದನ್ನು ಫಲವಾಗಿ (ಪುರುಷಾರ್ಥವಾಗಿ) ಹೇಳಿರುವುದರಿಂದ ನಮಸ್ಸು ಫಲವನ್ನು ತಿಳಿಸುತ್ತದೆ. (ನಾರಾಯಣಾಯ ನಮಃ—ಸ್ವಾರ್ಥ ರಹಿತನಾಗಿ ನಾರಾಯಣನಿಗೆ ಕೈಂಕರ್ಯವಾಗಿ ಅವನಿಗೆ ನಮಸ್ಕರಿಸುತ್ತೇನೆ ಎಂದು ನಮಸ್ಸು ಪುರುಷಾರ್ಥವನ್ನು ಪ್ರಕಾಶ ಪಡಿಸುತ್ತದೆ.)

**89. "ಉತ್ತದುಮ್ ಉನ್ನಡಿಯಾರ್ಕ್ಕಡಿಮೈ" ಎನ್ಗಿರಪಡಿಯೇ ಇದಿಲೇ ಭಾಗವತ ಶೇಷತ್ವಮ್ ಅನುಸಂಧೇಯಮ್.**

"ಉತ್ತದುಮ್ ಉನ್ನಡಿಯಾರ್ಕ್ಕಡಿಮೈ" ಎಂಬ ತಿರುಮಂಗೈ ಆಳ್ವಾ- ರ್ರವರ ಪೆರಿಯ ತಿರುಮೊಳಿಯ (8–1–3) ಪಾಶುರದಲ್ಲಿ ನಿನ್ನ ಅಷ್ಟಾಕ್ಷರ

ವನ್ನು ಕಲಿತ ನಾನು ನಿನ್ನ ದಾಸರಿಗೆ ಸೇವೆಯನ್ನು ಮಾಡಲು ತೊಡಗಿದೆನು ಎಂದು ಹೇಳಿರುವಂತೆ ಈ ನಮಸ್ಸಿನಲ್ಲಿ (ಭಗವತ್ ಶೇಷತ್ವಕ್ಕೆ ಎಲ್ಲೆಯಾದ) ಭಾಗವತ ಶೇಷತ್ವವು ಅರ್ಥಾತ್ ಅನುಸಂಧಾನ ಮಾಡತಕ್ಕದ್ದು

**90. ಇದು "ಅ" ಕಾರತ್ತಿಲೇಯೆನ್ರುವತ್ ಶೊಲ್ಲುವರ್‌ಗಳ್; "ಉ" ಕಾರತ್ತಿಲೇಯೆನ್ರುವತ್ ಶೊಲ್ಲುವರ್‌ಗಳ್.**

ಭಗವತ್ ಶೇಷತ್ವಕ್ಕೆ ಎಲ್ಲೆಯಾದ ಈ ಭಾಗವತ ಶೇಷತ್ವ ಅನುಸಂಧಾನವು ನಮಸ್ಸಿನಲ್ಲಿ ಮಾತ್ರವಲ್ಲದೆ ಲುಪ್ತ ಚತುರ್ಥಿಯಿಂದ ಕೂಡಿರುವ ಅಕಾರದಲ್ಲೂ,ಅನನ್ಯಾರ್ಹ ಶೇಷತ್ವವನ್ನು ಪ್ರತಿಪಾದಿಸುವ ಉಕಾರದಲ್ಲೂ ಅರ್ಥಾತ್ ಹೇಳಿದೆ ಎಂದೂ ತಿಳಿಸಿದ್ದಾರೆ. (ಅಂದರೆ ಭಗವತ್ ಶೇಷತ್ವವನ್ನು ತಿಳಿಸುವ ಅಕಾರವೂ ಮತ್ತು ಭಗವದನನ್ಯಾರ್ಹ ಶೇಷತ್ವವನ್ನು ತಿಳಿಸುವ ಉಕಾರವೂ ಅರ್ಥಬಲದಿಂದ ಅವುಗಳಿಗೆ ಎಲ್ಲೆಯಾದ ಭಾಗವತ ಶೇಷತ್ವ ಅನುಸಂಧಾನವನ್ನೂ ತಿಳಿಸುತ್ತವೆ ಎಂದೂ ತಿಳಿಸಿದ್ದಾರೆ.)

**91. ಈಶ್ವರನ್ ತನಕ್ಕೇಯಾಯಿರುಕ್ಕುಮತ್; ಅಚಿತ್ತು ಪಿರರ್‌ಕ್ಕೇಯಾಯಿರುಕ್ಕುಮತ್; ಆತ್ಮಾ ತನಕ್ಕುಮತ್ ಪಿರರ್‌ಕ್ಕುಮತ್ ಪೊದುವಾಯಿರುಕ್ಕುಮತ್ ಎನ್ರು ಮೂರ್ ಪಟ್ಟೆ ನಿನ್ರವು; ಅಜ್ಞಾನತ್ತಿಲ್ ಅಚಿತ್ತೈಪ್ಪೋಲೆ ತನಕ್ಕೇಯಾಗ ಎನ್ರೆಕ್ಕೊಳ್ಳ ವೇಣುಮತ್ ಎನ್ಗಿರದು ನಮಸ್ಸಾಲ್.**

ನಮಸ್ಸಿನ ಅರ್ಥವು ಮನಸ್ಸಿಗೆ ನಾಟುವುದಕ್ಕೆ ಮೊದಲು ಸ್ವತಂತ್ರನಾದ ಪರಮಾತ್ಮನು ತನಗಾಗಿಯೇ ಇದ್ದಾನೆ; ಚೈತನ್ಯರಹಿತವಾಗಿ ಪಾರತಂತ್ರ್ಯವನ್ನೇ ಸ್ವಭಾವವಾಗಿ ಉಳ್ಳ ಅಚಿತ್ತು ಪರಾರ್ಥವಾಗಿ ಇತರರಿಗಾಗಿಯೇ ಇದೆ. ಆತ್ಮನು ಜ್ಞಾನವುಳ್ಳವನಾಗಿರುವುದರಿಂದ ಸ್ವತಂತ್ರನಾಗಿಯೂ, ಶೇಷತ್ವವುಳ್ಳವನಾಗಿರುವುದರಿಂದ ಪರಾರ್ಥನಾಗಿಯೂ ಇರುವನು ಎಂಬ ಮನೋಭಾವನೆಯು ಇರುತ್ತದೆ ಆದರೆ ಈ ನಮಸ್ಸಿನ ಭಗವದತ್ಯಂತ ಪಾರತಂತ್ರ್ಯಜ್ಞಾನವು ಮನಸ್ಸಿಗೆ ನಾಟಿದ ಮೇಲೆ 'ತನಕ್ಕೇಯಾಗ ಎನ್ನೈಕ್ಕೊಳ್ಳುಮೊದೇ' ಎಂದರೆ ನಿನ್ನ ಆನಂದಕ್ಕಾಗಿಯೇ ನನ್ನನ್ನು ಉಪಯೋಗಿಸಿಕೋ ಎಂದು ತಿರುವಾಯ್ಮೊಳಿ (2–9–4) ಪಾಶುರದಲ್ಲಿ ನಮ್ಮಾಳ್ವಾರ್ ಹೇಳಿರುವಂತೆ ತಾನು ಅಚಿತ್ತಿನಂತೆ ಪರಮಾತ್ಮನ ಆನಂದಕ್ಕಾಗಿಯೇ ಇರುವವನು ಎಂಬ ಮನೋಭಾವನೆಯು ಉಂಟಾಗುತ್ತದೆ. (ಅಂದರೆ ಅಚಿತ್ತು ಹೇಗೆ ಚೇತನನಿಗೆ ಅತ್ಯಂತ ಪರತಂತ್ರವಾಗಿ ಅವನ

ಆನಂದಕ್ಕಾಗಿ ಇದೆಯೋ ಅದೇರೀತಿ ಚೇತನನೂ ಪರಮಾತ್ಮನಿಗೆ ಅತ್ಯಂತ ಪರತಂತ್ರನಾಗಿ ಅವನ ಆನಂದಕ್ಕಾಗಿಯೇ ಇರುವವನು ಎಂದು ತಿಳಿಯುತ್ತದೆ.)

**92. ಅದಾವದು—ಭೋಗದಶೈಯಿಲ್ ಈಶ್ವರನ್ ಅಳಿಕ್ಕುವತ್ ಪೋದು ನೊಕ್ಕವೇಣುಮೆನ್ರು ಅಳಿಯಾದೊಳಿಗ್ಕೆ.**

ಪರಮಾತ್ಮನು ಚೇತನನನ್ನು ತನ್ನ ಸ್ವಂತ ಭೋಗಾನುಭವಕ್ಕಾಗಿ ಉಪಯೋಗಿಸಿಕೊಳ್ಳುವಾಗ ಚೇತನನ ಶೇಷತ್ವಕ್ಕೆ ಕೊರತೆ ಉಂಟು ಮಾಡಿದರೆ ಅವನು ತನ್ನ ಶೇಷತ್ವವನ್ನು ಕಾಪಾಡಿಕೊಳ್ಳಬೇಕೆಂದು ಪರಮಾತ್ಮನ ಮುಖೋಲ್ಲಾಸವನ್ನು ನಾಶಪಡಿಸದೆ ಇರಬೇಕು. (ಪರಮಾತ್ಮನ ಇಷ್ಟಕ್ಕೆ ತಾನು ಸಂಪೂರ್ಣ ತಲೆಬಾಗಿ ಅತ್ಯಂತ ಪರತಂತ್ರನಾಗಿ ಅವನ ಇಷ್ಟವನ್ನು ವಿರೋಧಿಸದೆ ಇರಬೇಕು.)

**93. ಅಳಿಕ್ಕೈಕ್ಕು ಹೇತು ಕೀಳೆ ಶೊಲ್ಲಿತ್ತು; ಮೇಲುವತ್ ಶೊಲ್ಲುವರ್.**

ಹೀಗೆ ಚೇತನನು ಪರಮಾತ್ಮನ ಇಷ್ಟವನ್ನು ವಿರೋಧಿಸಿ ಅವನ ಭೋಗವನ್ನು ನಾಶಪಡಿಸುವುದಕ್ಕೆ ಶೇಷತ್ವವೇ ಆತ್ಮನ ಸ್ವರೂಪವು ಎಂದಿರುವುದೇ ಕಾರಣವು. ಈ ಶೇಷತ್ವವು ಹಿಂದೆ ಪ್ರಣವದಲ್ಲಿ ಹೇಳಲ್ಪಟ್ಟಿತು. ಮುಂದೆ "ಆಯ" ಎಂಬ ವ್ಯಕ್ತ ಚತುರ್ಥಿಯಲ್ಲೂ ತಿಳಿಸಲ್ಪಡುತ್ತದೆ. (ಆದರೆ ಭಗವದನನ್ಯಾರ್ಹ ಶೇಷತ್ವವು ಭಗವದತ್ಯಂತ ಪಾರತಂತ್ರ್ಯದಿಂದ ಕೂಡಿರಬೇಕು ಎಂಬುದು ನಮಸ್ಸಿನಿಂದ ಪ್ರತಿಪಾದಿಸಲ್ಪಟ್ಟಿದೆ.)

**94. ಇನಿ ಇನ್ನಿನೈವು ಪಿರಂದ ಪೋದೇ ಕೃತ ಕೃತ್ಯನ್; ಇನ್ನಿನೈವು ಇಲ್ಲಾದ ಪೋದು ಎಲ್ಲಾ ದುಷ್ಕೃತಂಗಳುವತ್ ಕೃತವತ್; ಇನ್ನಿನೈವಿಲೆ ಎಲ್ಲಾ ಸುಕೃತಂಗಳುವತ್ ಉಂಡು; ಇದಿನ್ರಿಕ್ಕೇ ಇರುಕ್ಕಪ್ಪಣ್ಣುವತ್ ಯಜ್ಞಾದಿಗಳುವತ್ ಪ್ರಾಯಶ್ಚಿತ್ತಾದಿಗಳುವತ್ ನಿಷ್ಪ್ರಯೋಜನಂಗಳ್; ಇದು ತನ್ನಾಲೇ ಎಲ್ಲಾ ಪಾಪಂಗಳುವತ್ ಪೋವತ್. ಎಲ್ಲಾ ಫಲಂಗಳುವತ್ ಉಂಡಾವತ್.**

ಈ ನಮಃ ಶಬ್ದಾರ್ಥದ ಜ್ಞಾನವು ಉಂಟಾದ ಮೇಲೆ ಅಂದರೆ ತಾನು ಭಗವದತ್ಯಂತ ಪರತಂತ್ರನು ಎಂಬ ಪಾರತಂತ್ರ್ಯ ಪ್ರತಿಪತ್ತಿ ಉಂಟಾದ ಮೇಲೆ ಚೇತನನು ಕತಕೃತ್ಯನಾಗುವನು. ಅಂದರೆ ತನ್ನ ಹಿತವನ್ನು ಸಾಧಿಸಿಕೊಂಡವನಾಗುವನು. ಈ ಪಾರತಂತ್ರ್ಯ ಪ್ರತಿಪತ್ತಿ ಇಲ್ಲದೇ ಹೋದಾಗ

(ಆತ್ಮಾಪಹಾರ ರೂಪ) ಸಕಲ ದುಷ್ಕೃತ್ಯಗಳೂ ಇವನಿಂದ ಮಾಡಲ್ಪಟ್ಟವು ಗಳಾಗಿಬಿಡುತ್ತವ. ಈ ಪಾರತಂತ್ರ್ಯ ಪ್ರತಿಪತ್ತಿ ಉಂಟಾದರೆ ಭಗವತ್ಪ್ರೀತಿಗೆ ಕಾರಣವಾದ ಸಕಲ ಸುಕೃತಗಳನ್ನೂ ಇವನು ಮಾಡಿದವನಾಗುತ್ತಾನೆ. ಈ ಜ್ಞಾನವಿಲ್ಲದೆ ಮಾಡುವ ಯಜ್ಞಯಾಗಾದಿಗಳೂ, ಪ್ರಾಯಶ್ಚಿತ್ತಾದಿಗಳೂ ಪ್ರಯೋಜನವಿಲ್ಲದವುಗಳಾಗುತ್ತವೆ. ಈ ಪಾರತಂತ್ರ್ಯ ಪ್ರತಿಪತ್ತಿಯಿಂದ ಎಲ್ಲಾ ಪಾಪಗಳೂ ಹೋಗಿ (ಸಂಸಾರ ನಿವೃತ್ತಿಯಿಂದ ಪ್ರಾರಂಭಿಸಿ ಭಗವತ್ ಕೈಂಕರ್ಯ ಪ್ರಾಪ್ತಿವರೆಗಿನ) ಸಕಲ ಫಲಗಳೂ ಪ್ರಾಪ್ತವಾಗುತ್ತವೆ.

## ನಾರಾಯಣಪದದ ಪ್ರತಿಪಾದನೆ
## (ಸೂತ್ರಗಳು 95 ರಿಂದ 105)

**95. ನಾರಾಯಣನೆನ್ರದು ನಾರಂಗಳುಕ್ಕು ಅಯನಮೆನ್ರ ಪಡಿ.**

"ನಾರಾಯಣ" ಎಂಬ ಪದವು ನಾರಗಳಿಗೆ ಅಂದರೆ ಸಮಸ್ತ ವಸ್ತುಗಳಿಗೂ "ಆಯನಂ" ಎಂದರೆ ವಾಸಸ್ಥಾನವಾದವನು ಎಂಬ ಅರ್ಥವನ್ನು ತಿಳಿಸುತ್ತದೆ.

**96. ನಾರಂಗಳಾವನ ನಿತ್ಯವಸ್ತುಕ್ಕಳಿನುಡೈಯ ತಿರಳ್.**

ನಾರಾ—ನಾರಾಗಳು ಯಾವುವೆಂದರೆ ಸಮಸ್ತ ನಿತ್ಯವಾದ ವಸ್ತುಗಳ ಸಮೂಹಗಳು.

**97. ಅನ್ವೈಯಾವನ-ಜ್ಞಾನಾನಂದಾಮಲತ್ವಾದಿಗಳುಮ್, ಜ್ಞಾನ ಶಕ್ತ್ಯಾದಿಗಳುಮ್, ವಾತ್ಸಲ್ಯ ಸೌಶೀಲ್ಯಾದಿಗಳುಮ್, ತಿರು-ಮೇನಿಯುಮ್, ಕಾಂತಿಸೌಕುಮಾರ್ಯಾದಿಗಳುಮ್, ದಿವ್ಯ ಭೂಷಣಂಗಳುಮ್, ದಿವ್ಯಾಯುಧಂಗಳುಮ್, ಪೆರಿಯ ಪಿರಾಟ್ಟಿಯಾರ್ ತೊಡಕ್ಕಮಾನ ನಾಯ್ಚ್ಚಿಮಾರ್‌ಗಳುಮ್, ನಿತ್ಯಸೂರಿಗಳುಮ್, ಛತ್ರಚಾಮರಾದಿಗಳುಮ್, ತಿರುವಾಶಲ್-ಕಾಕ್ಕುಮ್ ಮುದಲಿಗಳುಮ್, ಗಣಾಧಿಪರುಮ್, ಮುಕ್ತ-**

ರುಮ್, ಪರಮಾಕಾಶಮುಮ್, ಪ್ರಕೃತಿಯುಮ್, ಬದ್ಧಾತ್ಮಾಕ್ಕಳುಮ್, ಕಾಲಮುಮ್, ಮಹದಾದಿ ವಿಕಾರಂಗಳುಮ್, ಅಂಡಂಗಳುಮ್, ಅಂಡತ್ತುಕ್ಕುಳ್ ಪಟ್ಟ ದೇವಾದಿ ಪದಾರ್ಥಂಗಳುಮ್.

ಅವು ಯಾವುವೆಂದರೆ (ಭಗವತ್ ಸ್ವರೂಪ ನಿರೂಪಕಧರ್ಮಗಳಾದ) ಜ್ಞಾನ ಆನಂದ ಅಮಲತ್ವಾದಿಗಳೂ, (ಆ ಸ್ವರೂಪ ವಿಶೇಷಣಗಳಾದ) ಜ್ಞಾನ ಶಕ್ತ್ಯಾದಿ ಷಡ್ಗುಣಗಳೂ, ವಾತ್ಸಲ್ಯ ಸೌಶೀಲ್ಯಾದಿ ಅನಂತ ಕಲ್ಯಾಣ ಗುಣಗಳೂ, ಪರಮಾತ್ಮನ ದಿವ್ಯ ಮಂಗಳ ವಿಗ್ರಹವೂ, ಕಾಂತಿ ಸೌಕುಮಾರ್ಯಾದಿ ದಿವ್ಯ ಮಂಗಳ ವಿಗ್ರಹದ ಗುಣಗಳೂ, ದಿವ್ಯ ಭೂಷಣಗಳೂ, ದಿವ್ಯಾಯುಧಗಳೂ, ಶ್ರೀದೇವಿಯೊಡಗೂಡಿ ಸಮಸ್ತ ಮಹಿಷಿಗಳೂ, ನಿತ್ಯಸೂರಿಗಳೂ, ಛತ್ರ ಚಾಮರಾದಿಗಳೂ, ಬಾಗಿಲು ಕಾಯುವ ದ್ವಾರಪಾಲಕರೂ, ಗಣಾಧಿಪರೂ, ಮುಕ್ತರೂ, ಪರಮಾಕಾಶವೂ (ಪರಮ ಪದವೂ), ಪ್ರಕೃತಿಯೂ, ಬದ್ಧ ಜೀವಾತ್ಮರುಗಳೂ, ಕಾಲವೂ, ಮಹದಾದಿ ವಿಕಾರಗಳೂ, ಅಂಡಗಳೂ, (ಲೋಕಗಳೂ) ಅಂಡಗಳಲ್ಲಿರುವ ದೇವ ಮನುಷ್ಯ ತಿರ್ಯಕ್ ಸ್ಥಾವರಾದಿ ಪದಾರ್ಥಗಳೂ ಎಲ್ಲವೂ ನಾರಪದದಲ್ಲಿ ತಿಳಿಸಲ್ಪಟ್ಟವೆ.

**98. ಅಯನಮೆನ್ರದು ಇವಟ್ರುಕ್ಕು ಆಶ್ರಯಮೆನ್ರ ಪಡಿ.**

"ಅಯನಂ" ಎಂದರೆ ಇವುಗಳಿಗೆ ಆಶ್ರಯನಾದವನು ಎಂದು ಅರ್ಥ. (ನಾರಾಣಾಂ ಅಯನಂ ಯಃ ಸಃ ನಾರಾಯಣಃ = ಅಂದರೆ ನಾರಶಬ್ದದಲ್ಲಿ ತಿಳಿಸಿದ ಪದಾರ್ಥಗಳಿಗೆಲ್ಲಾ ಆಶ್ರಯನಾದವನು ಯಾರೋ ಅವನು ನಾರಾಯಣನು ಎಂಬುದು ಒಂದು ಅರ್ಥ—ತತ್ಪುರುಷ ಸಮಾಸದ ಅರ್ಥ.)

**99. ಅಂಗನನ್ರಿಕ್ಕೇ ಇವೈ ತನ್ನೈ ಆಶ್ರಯಮಾಗವುಡೈಯ ನೆನ್ನವುಮಾಮ್.**

ಅದಲ್ಲದೆ ಇದೆಲ್ಲವನ್ನೂ ತನಗೆ ಆಶ್ರಯವಾಗಿ ಹೊಂದಿರುವವನು ನಾರಾಯಣನು ಎಂದು ಇನ್ನೊಂದು ಅರ್ಥವೂ ಉಂಟು (ನಾರಾಃ ಅಯನಂ ಯಸ್ಯ ಸಃ ನಾರಾಯಣಃ ಅಂದರೆ ಸಮಸ್ತ ಪದಾರ್ಥಗಳು ಯಾರಿಗೆ ಆಶ್ರಯವಾಗಿವೆಯೋ ಅವನು ನಾರಾಯಣನು ಎಂಬುದು ಇನ್ನೊಂದು ಅರ್ಥ—ಬಹುವ್ರೀಹಿ ಸಮಾಸದ ಅರ್ಥ.)

**100. ಇನ್ನೈ ಇರಂಡಾಲುಂವ್ ಫಲಿತ್ತದು ಪರತ್ವ ಸೌಲಭ್ಯಂಗಳ್.**

ಈ ಎರಡು ವಿಧವಾದ ಅರ್ಥದಿಂದ ಪರಮಾತ್ಮನ ಪರತ್ವವೂ (ಅಂದರೆ ಜಗತ್ತಿಗೆಲ್ಲಾ ಆಧಾರನಾಗಿರುವಿಕೆಯೂ) ಸೌಲಭ್ಯವೂ (ಅಂದರೆ ಸಕಲ ಪದಾರ್ಥಗಳಲ್ಲೂ ಅಂತರಾತ್ಮನಾಗಿರುವಿಕೆಯೂ) ತಿಳಿಸಲ್ಪಟ್ಟಿವೆ.

**101. ಅಂತರ್ಯಾಮಿತ್ವಮುಂವ್, ಉಪಾಯತ್ವಮುಂವ್ ಉಪೇಯತ್ವಮುಂವ್ ಆಗವುಮಾಮ್.**

ಅದೂ ಅಲ್ಲದೆ ಪರಮಾತ್ಮನ ಅಂತರ್ಯಾಮಿತ್ವವೂ, ಉಪಾಯತ್ವವೂ, ಉಪೇಯತ್ವವೂ, ನಾರಾಯಣ ಎಂಬ ಪದದಿಂದ ತಿಳಿಸಲ್ಪಟ್ಟಿದೆ ಎಂದೂ ಹೇಳಿದೆ.

**102. "ಎಂಬಿರಾನ್ ಎಂದೈ" ಎನ್‌ಗೈಯಾಲೆ ಈಶ್ವರನೇ ಎಲ್ಲಾ ವುರವುಮುರ್ಕೈಯುಂವ್ ಎನ್ರು ಶೊಲ್ಲುವ್.**

"ಎಂಬಿರಾನ್ ಎಂದೈ" ಎಂಬ ಪೆರಿಯ ತಿರುಮೊಳಿ (1–1–6) ಪಾಶುರದಲ್ಲಿ ತಿರುಮಂಗೈ ಆಳ್ವಾರ್ರು ಹೇಳಿರುವಂತೆ ಪರಮಾತ್ಮನೇ ಚೇತನರಿಗೆ ಸರ್ವವಿಧಬಂಧುವು ಎಂಬುದು ಈ ನಾರಾಯಣ ಪದದಲ್ಲಿ ಹೇಳಲ್ಪಟ್ಟಿದೆ.

**103. ನಾಮ್ ಪಿರರ್‌ಕ್ಕಾನವನ್ರುಮ್ ಅವನ್ ನಮಕ್ಕಾಯಿರುಕ್ಕುಮ್.**

ನಾವು ಪರಮಾತ್ಮನನ್ನು ಮರೆತು ಇತರರೊಂದಿಗೆ ಕಲೆತು ಅನ್ಯಪರರಾಗಿ ಇದ್ದರೂ ಅವನು ನಮಗೆ ಹಿತಪರನಾಗಿಯೇ ಇರುವನು.

**104. ಇರಾಮುಡಮೂಟ್ಟುವಾರ್ಕೈಪ್ಪೋಲೆ ಉಳ್ಳೇಪದಿಕಿಡಂದು ಸತ್ತೈಯೇ ಪಿಡಿತ್ತು ನೋಕ್ಕಿಕ್ಕೊಂಡು ಪೋರುಮ್.**

ಅಹಂಕಾರಿಯಾದ ಒಬ್ಬ ಮಗನು ಕೋಪಗೊಂಡು ಮನೆಬಿಟ್ಟು ಸತ್ರಕ್ಕೆ ಹೋದಾಗಲೂ ಅವನ ತಾಯಿಯು ಅವನಿಗೆ ತಿಳಿಯದಂತೆ ರಾತ್ರಿಯಲ್ಲಿ ಸತ್ರದಲ್ಲಿ ಮರೆಸಿಕೊಂಡಿದ್ದು, ಅವನಿಗೆ ಊಟ ಮಾಡಿಸುತ್ತಾಳೆ, ಅದೇ ರೀತಿ ತಾವು ಸ್ವತಂತ್ರರೆಂದು ಅಹಂಕಾರ ಹೊಂದಿ ತಲೆಬಾಗದ ಚೇತನರನ್ನೂ ಅವರ ಕಣ್ಣಿಗೆ ಕಾಣಿಸದಂತೆ ಪರಮಾತ್ಮನು ಒಳಗೆ ಅಂತರಾತ್ಮನಾಗಿ ಮರೆಸಿಕೊಂಡಿದ್ದು ಜನ್ಮಪಡೆದಂದಿನಿಂದಲೂ ಅವರನ್ನು ರಕ್ಷಿಸುತ್ತಿದ್ದಾನೆ.

## "ಆಯ" ಎಂಬ ಚತುರ್ಥೀ ವಿಭಕ್ತಿ ಪ್ರತ್ಯಯದ ಅರ್ಥ
## (ಸೂತ್ರಗಳು 105 ರಿಂದ 112)

**105. "ಆಯ" ಎನ್ಗಿರಇತ್ತಾಲ್ "ಶೆನ್ರಾಲ್ ಕುಡ್ಯೆಯಾವನ್" ಎನ್ಗಿರಪಡಿಯೇ ಎಲ್ಲಾ ಅಡಿಮೈಗಳುಮ್ ಶೆಯ್ಯವೇಣು-ಮೆನ್ರು ಅಪೇಕ್ಷಿಕ್ಕಿರದು.**

"ನಾರಾಯಣಾಯ" ಎಂಬ ಪದದಲ್ಲಿರುವ ಆಯ ಎಂಬ ಚತುರ್ಥೀ ಪ್ರತ್ಯಯವು "ಶೆನ್ರಾಲ್ ಕುಡ್ಯೆಯಾಮ್" ಅಂದರೆ ಆದಿಶೇಷನು ಪರಮಾತ್ಮನು ಹೊರಟರೆ ಕೊಡೆಯಂತೆ ಇರುತ್ತಾನೆ ಎಂಬ ಮೊದಲ್ ತಿರುವಾಯ್ಮೊಳಿಯ 52ನೇ ಪಾಶುರದಲ್ಲಿ ಹೇಳಿರುವಂತೆ ಆದಿಶೇಷನ ಹಾಗೆ ಪರಮಾತ್ಮನಿಗೆ ಸರ್ವವಿಧ ಕೈಂಕರ್ಯಗಳನ್ನೂ ಮಾಡಲು ಆಸೆಪಡ ಬೇಕೆಂದು ತಿಳಿಸುತ್ತದೆ.

**106. ನಮಸ್ಸಾಲೆ ತನ್ನೋಡು ಉರವಿಲ್ಲೈ ಎನ್ರುವೈತ್ತು ಕೈಂಕರ್ಯತ್ತೈ ಪ್ರಾರ್ಥಿಕ್ಕಕೂಡುಮೋವೆನ್ನಿಲ್.**

ನಮಸ್ಸಿನಲ್ಲಿ ಚೇತನನು ಸ್ವತಂತ್ರನಲ್ಲ ಭಗವದತ್ಯಂತ ಪರತಂತ್ರನೆಂದು ಹೇಳಿರುವಾಗ ಅವನು ಕೈಂಕರ್ಯ ಮಾಡಬೇಕು ಎಂದು ಆಸೆ ಪಡುವುದು ಸರಿಯೇ ಎಂದರೆ—

**107. "ಪಡಿಯಾಯ್ಕ್ಕಿಡಂದು ಉನ್ ಪವಳವಾಯ್ ಕಾಣ್ಬೇನೇ" ಎನ್ಗಿರಪಡಿಯೆ ಕೈಂಕರ್ಯ ಪ್ರಾರ್ಥನೈ ವಂದೇರಿಯುನ್ರು ಸ್ವರೂಪ-ಪ್ರಯುಕ್ತವ್.**

"ಪಡಿಯಾಯ್ಕ್ಕಿಡಂದು ಉನ್‌ಪವಳ ವಾಯ್ ಕಾಣ್ಬೇನೇ" ಎನ್ಗಿರಪಡಿಯೆ ಅಂದರೆ ನಿನ್ನ ದೇವಸ್ಥಾನದಲ್ಲಿ ಅತ್ಯಂತ ಪರತಂತ್ರವಾದ ಒಂದು ಮೆಟ್ಟಿಲಾಗಿ ಬಿದ್ದಿದ್ದು ಹವಳದಂತೆ ಸುಂದರವಾಗಿರುವ ನಿನ್ನ ಮುಖೋಲ್ಲಾಸವನ್ನು ನೋಡಿ ಆನಂದ ಪಡುತ್ತೇನೆ ಎಂದು ಪೆರುಮಾಳ್ ತಿರುಮೊಳಿಯ (4–9ನೆಯ) ಪಾಶುರದಲ್ಲಿ ಕುಲಶೇಖರ ಆಳ್ವಾರ್ ತಿಳಿಸಿರುವಂತೆ ಸ್ವಾಮಿಯಾದ ಪರಮಾತ್ಮನಿಗೆ ದಾಸನಾದ ತಾನು ಕೈಂಕರ್ಯವನ್ನು ಮಾಡ

ಬೇಕೆಂಬ ಈ ಪ್ರಾರ್ಥನೆಯು ದಾಸನಾದ ಚೇತನನಿಗೆ ಸ್ವರೂಪ ಪ್ರಯುಕ್ತ ವಾದುದೇ ವಿನಃ ಕೈಂಕರ್ಯದ ಆನಂದವನ್ನು ತಾನು ಅನುಭವಿಸಬೇಕೆಂಬ ಅಹಂಕಾರದಿಂದ ಉಂಟಾದುದಲ್ಲ.

**108. ಆಗ್ಯೈಯಾಲೆ "ವಳುವಿಲಾವಡಿಮೈ ಶೆಯ್ಯವೇಂಡುವಮ್ ನಾವಮ್" ಎನ್‌ಗಿರ ಪ್ರಾರ್ಥನೈಯೈ ಕಾಟ್ಟುಗಿರದು.**

ಆದ್ದರಿಂದ "ವಳುವಿಲಾವಡಿಮೈ ಶೆಯ್ಯವೇಂಡುಂ ನಾಮ್" ಎಂಬ ತಿರು ವಾಯ್ಮೊಳಿಯ (3-3-1) ಪಾಶುರದಲ್ಲಿ ಪ್ರಾರ್ಥಿಸುವಂತೆ ಯಾವು ದನ್ನೂ ಬಿಡದೆ ಸಕಲವಿಧವಾದ ಕೈಂಕರ್ಯಗಳನ್ನೂ ತಾನು ಮಾಡ ಬೇಕೆಂಬ ಪ್ರಾರ್ಥನೆಯನ್ನು ಈ 'ಆಯ' ಎಂಬ ಚತುರ್ಥಿ ವಿಭಕ್ತಿ ಪ್ರತ್ಯಯವು ಪ್ರಕಾಶಪಡಿಸುತ್ತದೆ.

**109. "ಕಣ್ಣಾರಕ್ಕಂಡು ಕಳಿವದೋರ್ ಕಾದಲುಟ್ಟಾರ್‌ಕ್ಕುಮುಂಡೋ ಕಣ್‌ಗಳ್ ತುಂಜುದಲ್" ಎನ್‌ಗಿರಪಡಿಯೇ ಕಾಣ್ಬದರ್ಕು ಮುನ್ಬು ಉರಕ್ಕಮಿಲ್ಲೈ; ಕಂಡಾಲ್ "ಸದಾಪಶ್ಯಂತಿ" ಯಾಗ್ಯೈ-ಯಾಲೆ ಉರಕ್ಕಮಿಲ್ಲೈ.**

"ಕಣ್ಣಾರಕ್ಕಂಡು ಕಳಿವದೋರ್ ಕಾದಲುಟ್ಟಾರ್‌ಕ್ಕುಮುಂಡೋ ಕಣ್-ಗಳ್ ತುಂಜುದಲ್" ಎಂದು ತಿರುವಿರುತ್ತದ 97ನೆಯ ಪಾಶುರದಲ್ಲಿ ಹೇಳಿರುವಂತೆ ಭಗವಂತನ ದರ್ಶನವನ್ನು ಪಡೆಯಬೇಕೆಂಬ ಆತುರವುಳ್ಳವ ರಿಗೆ ಅವನ ದರ್ಶನಲಾಭವು ಉಂಟಾಗುವವರೆಗೆ ನಿದ್ರೆಯು ಬರುವುದಿಲ್ಲ. ಭಗವದ್ದರ್ಶನ ಪಡೆದ ಮೇಲೆ "ಸದಾಪಶ್ಯಂತಿ" ಎಂದು ಉಪನಿಷತ್ತಿನಲ್ಲಿ ನಿತ್ಯಸೂರಿಗಳು ಸದಾ ಪರಮಾತ್ಮನ ದರ್ಶನ ಮಾಡುತ್ತಾರೆ ಎಂದು ಹೇಳಿರುವಂತೆ ಇವರಿಗೂ ನಿತ್ಯಾನುಭವ ಮಾಡುತ್ತಿರುವುದರಿಂದ ನಿದ್ರೆ ಬರಲು ಅವಕಾಶವಿಲ್ಲ.

**110. "ಪಳುದೇ ಪಲಪಗಲುಮ್ ಪೋಯಿಎನ" ಎನ್ರು ಇಳಂದ ನಾಳುಕ್ಕು ಕ್ಕೊಪ್ಪಿಡುಗಿರವನುಕ್ಕು ಉರಂಗವಿರಗಿಲ್ಲೈ.**

ಭಗವದನುಭವ ಪಡೆದಮೇಲೆ "ಪಳುದೇ ಪಲಪಗಲುಮ್ ಪೊಯೀನ" ಎಂದು ಮೊದಲ ತಿರುವಂದಾದಿ 16ನೆಯ ಶ್ಲೋಕದಲ್ಲಿ ಹೇಳಿರುವಂತೆ ಭಗವದನುಭವ ಪಡೆಯದೆ ಅನೇಕ ಕಾಲವು ವ್ಯರ್ಥವಾಗಿ ಹೋಯಿತಲ್ಲಾ ಎಂದು ಕಳೆದುಹೋದ ದಿನಗಳನ್ನೆಲ್ಲಾ ನೆನೆಸಿಕೊಂಡು ಕ್ಲೇಶಗೊಳ್ಳುವವ ನಿಗೆ ಮುಂದಿನ ದಿನಗಳಲ್ಲೂ ನಿದ್ರೆ ಬರುವ ಸಂಭವವಿಲ್ಲ.

**111. "ಅನ್ರುನಾನ್ ಪಿರಂದಿಲೇನ್ ಪಿರಂದಪಿನ್ ಮರಂದಿಲೇನ್" ಎನ್ನಾನಿನ್ರಾರ್‌ಗಳಿರೇ.**

"ಅನ್ರುನಾನ್ ಪಿರಂದಿಲೇನ್ ಪಿರಂದಪಿನ್ ಮರಂದಿಲೇನ್" ಎಂದು ತಿರುಚ್ಛಂದವಿರುತ್ತದ 64ನೆಯ ಶ್ಲೋಕದಲ್ಲಿ ಅಂದು ನನಗೆ ಜ್ಞಾನ ಜನ್ಮವು ಉಂಟಾಗಿರಲಿಲ್ಲ; ಜ್ಞಾನಜನ್ಮವು ಉಂಟಾದಮೇಲೆ ನಾನು ಪರ ಮಾತ್ಮನನ್ನು ಎಂದೂ ಮರೆತಿಲ್ಲ ಎಂದು ತಿರುಮೊಳಿಶೈಆಳ್ವಾರ್‍ರು ತಿಳಿ ಸಿರುವಂತೆ ಈ ಭಗವದ್ವಿಷಯಜ್ಞಾನವುಂಟಾದಮೇಲೆ ಅದನ್ನು ಮರೆಯುವ ಪ್ರಸಕ್ತಿಯೇ ಇಲ್ಲ. ಆದ್ದರಿಂದ ಈ ಕೈಂಕರ್ಯ ಪ್ರಾರ್ಥನೆಯು ಸರ್ವದಾ ನಡೆಯುತ್ತಿರುತ್ತದೆ ಎಂದು ಅಭಿಪ್ರಾಯ.

**112. ಇವ್ವಡಿವ್ಕು ತಾನ್ "ಒಳಿವಿಲ್ ಕಾಲಮೆಲ್ಲಾಮ್ ಉಡ-ನಾಯ್ ಮನ್ನಿ" ಎನ್ಗಿರಪಡಿಯೇ ಸರ್ವದೇಶ, ಸರ್ವಕಾಲ, ಸರ್ವಾವಸ್ಥೈಗಳಿಲುಮ್ ಅನುವರ್‌ತಿಕ್ಕುಮ್.**

"ಒಳಿವಿಲ್ ಕಾಲಮೆಲ್ಲಾಮ್ ಉಡನಾಯ್ ಮನ್ನಿ" ಎಂದು ತಿರು ವಾಯ್ಮೊಳಿ (3–3–1) ಪಾಶುರದಲ್ಲಿ ಪ್ರಾರ್ಥಿಸಿರುವಂತೆ ಈ ಕೈಂಕರ್ಯ ಪ್ರಾರ್ಥನೆಯು ಸರ್ವದೇಶ, ಸರ್ವಕಾಲ, ಸರ್ವಾವಸ್ಥೆಗಳಲ್ಲೂ ಅನು ವರ್ತಿಸಿಕೊಂಡು ನಡೆದುಕೊಂಡು ಇರುತ್ತದೆ.

## ತಿರುಮಂತ್ರದ ಸಾರಾಂಶ
## (ಸೂತ್ರಗಳು 113 ರಿಂದ 115)

**113. ಷಟ್ಸಿಕ್ಕೈಯಾಯ್ ಮೂನ್ರುಶರಡಾಯ್ ಇರುಪ್ಪದೊರು ಮಂಗಳಸೂತ್ರಮ್ ಪೋಲೆ ತಿರುಮಂತ್ರಮ್.**

ಈ ತಿರುಮಂತ್ರವು ಎಂಟು ಎಳೆಗಳಾಗಿಯೂ, ಮೂರು ಚರಡು ಗಳಾಗಿಯೂ ಇರುವ ಒಂದು ಮಂಗಳವಾದ ಮಾಂಗಲ್ಯಸೂತ್ರದಂತೆ ಇದೆ. (ಎಂಟು ಅಕ್ಷರಗಳಿಂದಲೂ, 3 ಪದಗಳಿಂದಲೂ ಕೂಡಿದ್ದಾಗಿದೆ.)

**114. ಇತ್ತಾಲ್ ಈಶ್ವರನ್ ಆತ್ಮಾಕ್ಕಳುಕ್ಕು ಪ್ಪತಿಯಾಯ್ ನಿನ್ರು ರಕ್ಷಿಕ್ಕುಮ್ ಎನ್ಗಿರದು.**

ಹೀಗೆ ತಿರುಮಂತ್ರವನ್ನು ಮಂಗಳಸೂತ್ರಕ್ಕೆ ಹೋಲಿಸಿರುವುದರಿಂದ ಪರಮಾತ್ಮನು ತಿರುಮಂತ್ರ ಸಂಬಂಧ ಪಡೆದಿರುವ ಚೇತನರಿಗೆ ಪತಿಯಾಗಿದ್ದುಕೊಂಡು ರಕ್ಷಿಸುತ್ತಾನೆ ಎಂಬುದು ತಿಳಿಸಲ್ಪಟ್ಟಿದೆ.

**115. ಆಗ ತಿರುಮಂತ್ರತ್ತಾಲ್ ಎಂಬೆರುಮಾನುಕ್ಕೇ ಉರಿಯೇನಾನ ನಾನ್ ಎನಕ್ಕುರಿಯುನನ್ನಿಕ್ಕೇಯೊಳಿಯ ವೇಣುಮ್; ಸರ್ವ-ಶೇಷಿಯಾನ ನಾರಾಯಣನುಕ್ಕೇ ಎಲ್ಲಾ ಅಡಿಮೈಗಳುಮ್ ಶೆಯ್ಯಪ್ಪೆರುವೇನಾಗವೇಣುಮ್ ಎನ್ರದಾಯ್‌ತ್ತು.**

ಆದ್ದರಿಂದ **ಸಾರಾಂಶವೇನೆಂದರೆ**—ತಿರುಮಂತ್ರದಲ್ಲಿ

**ಓಂ**—ಪರಮಾತ್ಮನಿಗೇ, ಶೇಷಭೂತನಾದ (ದಾಸನಾದ) ಚೇತನನಾದ ನಾನು.

**ನಮಃ**—(ಮಃನ) ನನಗೆ ನಾನು ಸ್ವತಂತ್ರನಲ್ಲ; ರಕ್ಷಕನಲ್ಲ; ಭಗವದತ್ಯಂತಪರತಂತ್ರನು; ಭಗವಂತನೇ ನನಗೆ ಸ್ವಾಮಿಯೂ ಮತ್ತು ರಕ್ಷಕನೂ ಆಗಿದ್ದಾನೆ ಎಂಬ ಭಗವದತ್ಯಂತಪಾರತಂತ್ರ್ಯ ಪ್ರತಿಪತ್ತಿ ಹೊಂದಿದವನಾಗಬೇಕು; ಮತ್ತು

**ನಾರಾಯಣಾಯ**—ಸರ್ವ ಶೇಷಿಯಾದ ನಾರಾಯಣನಿಗೇ ಸರ್ವವಿಧ ಕೈಂಕರ್ಯಗಳನ್ನೂ ಸ್ವಾರ್ಥರಹಿತನಾಗಿ ಸರ್ವದಾ ಮಾಡುವವನಾಗಬೇಕು ಎಂಬ ಪ್ರಾರ್ಥನೆಯು ಹೇಳಲ್ಪಟ್ಟಿದೆ.

**ತಿರುಮಂತ್ರ ಪ್ರಕರಣಮ್ ಮುತ್ತಿತ್ತು.**

**ಪಿಳ್ಳೈ ಲೋಕಾಚಾರ್ಯರ್ ತಿರುವಡಿಗಳೇ ಶರಣಮ್**

**ಜೀಯರ್ ತಿರುವಡಿಗಳೇ ಶರಣಮ್.**

ತಿರುಮಂತ್ರ ಪ್ರಕರಣವು ಮುಗಿಯಿತು.

# ದ್ವಯ ಪ್ರಕರಣವು

"ಶ್ರೀಮನ್ನಾರಾಯಣ ಚರಣೌ ಶರಣಂ ಪ್ರಪದ್ಯೇ।
ಶ್ರೀಮತೇ ನಾರಾಯಣಾಯ ನಮಃ।"

ಎಂಬ ದ್ವಯ ಮಂತ್ರವು.

## ಶ್ರೀವೈಷ್ಣವಾಧಿಕಾರಿಗೆ ಅವಶ್ಯವಾಗಿ ಇರಬೇಕಾದ ಗುಣಗಳು

(ಸೂತ್ರಗಳು 116 ರಿಂದ 121)

116. ಪುರಂಬುಂಡಾನ ಪತ್ತುಕ್ಕಳೈಯುಡೈಯ ವಾಸನೈಯೋಡೆ ವಿಡುಗೈಯುಮ್, ಎಂಬೆರುಮಾನೈಯೇ ತಂಜಮೆನ್ರು ಪತ್ತುಗೈಯುಮ್, ಪೇರು ತಪ್ಪಾದೆನ್ರು ತುಣಿಂದಿರುಕ್ಕೈಯುಮ್, ಪೇತ್ತುಕ್ಕು ತ್ವರಿಕ್ಕೈಯುಮ್, ಇರುಕ್ಕುಮ್ ನಾಳ್ ಉಗಂದರುಳಿನ ನಿಲಂಗಳಿಲೇ ಪ್ರವಣನಾಯ್ ಗುಣಾನುಭವ ಕೈಂಕರ್ಯಂಗಳಿಲೇ ಪೋದು ಪೋಕ್ಕಾಗೈಯುಂ, ಇಪ್ಪಡಿಯಿರುಕ್ಕುಮ್ ಶ್ರೀವೈಷ್ಣವರ್ಗಳೇತ್ತಮರಿಂದು ಉಗಂದಿರುಕ್ಕೈಯುಮ್, ತಿರುಮಂತ್ರತ್ತಿಲುಮ್ ದ್ವಯತ್ತಿಲುಂ ನಿಯತನಾಗೈಯುಮ್, ಆಚಾರ್ಯ ಪ್ರೇಮಮ್ ಕನತ್ತಿರುಕ್ಕೈಯುಮ್, ಆಚಾರ್ಯನ್ ಪಕ್ಕಲಿಲುಮ್ ಎಂಬೆರುಮಾನ್ ಪಕ್ಕಲಿಲುಮ್ ಕೃತಜ್ಞನಾಯ್ ಪೋರುಗೈಯುಮ್, ಜ್ಞಾನಮುಮ್ ವಿರಕ್ತಿಯುಮ್ ಶಾಂತಿಯುಮುಡೈಯನಾಯಿರುಕ್ಕುಮ್ ಪರಮ ಸಾತ್ವಿಕನೋಡೇ ಸಹವಾಸಮ್ ಪಣ್ಣುಗೈಯುಂ ವೈಷ್ಣವಾಧಿಕಾರಿಕ್ಕು ಅವಶ್ಯಾಪೇಕ್ಷಿತಮ್.

i. ಭಗವಂತನಲ್ಲದೆ ಇತರ ವಿಷಯಗಳಲ್ಲಿರುವ ಸಂಗಗಳೆಲ್ಲವನ್ನೂ ಮತ್ತೆ ಅನ್ವಯಿಸದಂತೆ ವಾಸನೆಯೊಂದಿಗೆ ತ್ಯಜಿಸುವುದು.

ii. (ಬೇರೆ ಯಾವುದನ್ನೂ ಉಪಾಯವಾಗಿ ನೆನೆಸದೆ) ಸರ್ವೇಶ್ವರ ನೊಬ್ಬನನ್ನೇ ರಕ್ಷಕನನ್ನಾಗಿ ಸ್ವೀಕರಿಸುವುದು.

iii. ಫಲವು ತಪ್ಪದೆ ಸಿದ್ಧಿಸುತ್ತದೆ ಎಂದು ದೃಢನಂಬಿಕೆ ಹೊಂದಿರು ವುದು.

iv. (ಫಲವು ಲಭಿಸಿದಾಗ ಲಭಿಸಲಿ ಎಂದು ಇರದೆ) ಫಲಸಿದ್ಧಿಗಾಗಿ ಆತುರ ಗೊಳ್ಳುವುದು.

v. ಈ ಶರೀರದೊಂದಿಗೆ ಇರುವಷ್ಟು ದಿನ ಸರ್ವೇಶ್ವರನು ಇಚ್ಛಿಸಿ ನೆಲೆಸಿರುವ ದಿವ್ಯ ದೇಶಗಳಲ್ಲಿ ಪ್ರಾವಣ್ಯ ಹೊಂದಿ, ಅವನ ಕಲ್ಯಾಣ ಗುಣಾನುಭವವನ್ನೂ, ಕೈಂಕರ್ಯವನ್ನೂ ತನ್ನ ಕಾಲಕ್ಷೇಪಕ್ಕೆ ವಿಷಯ ವಾಗಿ ಹೊಂದಿರುವುದು.

vi ಮೇಲೆ ವಿವರಿಸಿರುವ ಗುಣಗಳನ್ನೆಲ್ಲಾ ಹೊಂದಿರುವ ಶ್ರೀವೈಷ್ಣ ವರು ಯಾರಾದರೂ ಇದ್ದರೆ ಅವರ ವೈಭವವನ್ನು ಅರಿತು ಅವರ ವಿಷಯದಲ್ಲಿ ಪ್ರೀತಿ, ಗೌರವ ಹೊಂದಿರುವುದು.

vii. ತಿರುಮಂತ್ರದಲ್ಲೂ, ದ್ವಯಮಂತ್ರದಲ್ಲೂ ನಿರತನಾಗಿರುವುದು.

viii. ಇದೆಲ್ಲವನ್ನೂ ತನಗೆ ಉಪದೇಶಿಸಿದ ಆಚಾರ್ಯನ ವಿಷಯದಲ್ಲಿ ಪ್ರೇಮವನ್ನು ಹೊಂದಿರುವುದು.

xi. (ತನಗೆ ಉಪದೇಶ ಮಾಡಿದ) ಆಚಾರ್ಯನ ವಿಷಯದಲ್ಲೂ, (ಆಚಾರ್ಯನೊಂದಿಗೆ ತನ್ನನ್ನು ಸೇರಿಸಿದ) ಭಗವಂತನ ವಿಷಯದಲ್ಲೂ ಉಪಕಾರಸ್ಮೃತಿ ಹೊಂದಿರುವುದು.

x. ಜ್ಞಾನ ವೈರಾಗ್ಯ ಶಾಂತಿ ಯುಕ್ತನಾದ ಪರಮ ಸಾತ್ವಿಕನಾದ ಭಾಗವತನ ಜೊತೆಯಲ್ಲಿ ಸಹವಾಸಮಾಡುವುದು.

ಇವೆಲ್ಲವೂ ವೈಷ್ಣವಾಧಿಕಾರಿಗೆ ಅವಶ್ಯಕವಾದ ಗುಣಗಳು.

117. **ಇಂಪ ಅಧಿಕಾರಿಕ್ಕು ರಹಸ್ಯತ್ರಯಮುಮ್ ಅನುಸಂಧೇಯಂ.**

ಮೇಲೆ ವಿವರಿಸಿದ ಗುಣಗಳನ್ನು ಹೊಂದಿರುವ ಈ ಅಧಿಕಾರಿಗೆ ರಹಸ್ಯತ್ರಯಗಳೂ (ಅಂದರೆ ತಿರುಮಂತ್ರ, ದ್ವಯ, ಚರಮಶ್ಲೋಕ ಗಳೂ) ಅನುಸಂಧಾನ ವಿಷಯವಾಗಿರಬೇಕು.

118. **ಎಲ್ಲಾ ಪ್ರಮಾಣಂಗಳಿಲುಮ್ ದೇಹತ್ತಾಲೇ ಪೇರ್ ಎನ್ನಿರದು;**

**ತಿರುಮಂತ್ರತ್ತಿಲ್ ಆತ್ಮಾವಾಲೇ ಪೇರ್ ಎನ್ಗಿರದು; ಚರಮ-ಶ್ಲೋಕತ್ತಿಲ್ ಈಶ್ವರನಾಲೇ ಪೇರ್ ಎನ್ಗಿರದು; ದ್ವಯತ್ತಿಲ್ ಪೆರಿಯಪಿರಾಟ್ಟಿಯಾರಾಲೇ ಪೇರ್ ಎನ್ಗಿರದು.**

ರಹಸ್ಯತ್ರಯವಲ್ಲದ ಇತರ ಶಾಸ್ತ್ರಗಳಲ್ಲಿ (ವೇದಗಳಲ್ಲಿ) ಚೇತನನು ದೇಹದ ಮೂಲಕ (ಸಾಧನಾನುಷ್ಠಾನಗಳನ್ನು ಮಾಡಿ) ಪುರುಷಾರ್ಥ ಲಾಭವನ್ನು ಹೊಂದುತ್ತಾನೆ ಎಂದು ಹೇಳಿದೆ. ತಿರುಮಂತ್ರದಲ್ಲಿ ಸ್ವಪ್ರವೃತ್ತಿಯನ್ನು ಬಿಟ್ಟಿರುವ ಆತ್ಮನಿಂದ ಪುರುಷಾರ್ಥ ಲಾಭವೆಂದು ಹೇಳಿದೆ. ಚರಮ ಶ್ಲೋಕದಲ್ಲಿ ಚೇತನನ ಪಾಪಗಳನ್ನು ಹೋಗಲಾಡಿಸಿ ರಕ್ಷಿಸುವ ಈಶ್ವರನಿಂದಲೇ ಪುರುಷಾರ್ಥ ಲಾಭವೆಂದು ಹೇಳಿದೆ ದ್ವಯ ಮಂತ್ರದಲ್ಲಿ ಶ್ರೀ ಮಹಾಲಕ್ಷ್ಮಿಯ ಪುರುಷಕಾರದಿಂದ ಪುರುಷಾರ್ಥಲಾಭವೆಂದು ಹೇಳಿದೆ.

**119. ಪೆರಿಯ ಪಿರಾಟ್ಟಿಯಾರಾಲೇ ಪೇರಾಗೈಯಾವದು ಇವಳ್ ಪುರುಷಕಾರಮಾನಾಲಲ್ಲದು ಈಶ್ವರನ್ ಕಾರ್ಯಂ ಶೆಯ್ಯಾ-ನೆನ್‌ಗೈ.**

ಶ್ರೀ ದೇವಿಯ ಪುರುಷಕಾರದಿಂದ ಪುರುಷಾರ್ಥಲಾಭವೆನ್ನುವುದು ಹೇಗೆ ಎಂದರೆ (ಚೇತನನ ಅಪರಾಧಗಳನ್ನು ನೋಡದೆ ಅವನನ್ನು ರಕ್ಷಿಸುವಂತೆ) ಇವಳು ಪುರುಷಕಾರ ಮಾಡದಿದ್ದರೆ ಈಶ್ವರನು ಕಾರ್ಯಮಾಡುವುದಿಲ್ಲ ಎಂದು ಹೇಳಿದೆ.

**120. ದ್ವಯತ್ತುಕ್ಕು ಅಧಿಕಾರಿ ಆಕಿಂಚನ್ಯಮುಂ ಅನನ್ಯಗತಿತ್ವ-ಮುಮ್ ಉಡೈಯವನ್.**

ದ್ವಯಕ್ಕೆ ಅಧಿಕಾರಿಯಾದವನಿಗೆ (ಶರಣಾಗತಿ ಎಂಬ ಈ ಸಿದ್ಧೋಪಾಯವನ್ನು ಸ್ವೀಕರಿಸುವ ಅಧಿಕಾರಿಗೆ) ಆಕಿಂಚನ್ಯವೂ, ಅನನ್ಯಗತಿತ್ವವೂ ಇರಬೇಕು. (ಆಕಿಂಚನ್ಯವೆಂದರೆ ಉಪಾಯಾಂತರ ಶೂನ್ಯವಾಗಿರುವುದು ಅನನ್ಯಗತಿತ್ವವೆಂದರೆ ರಕ್ಷಕಾಂತರ ಶೂನ್ಯನಾಗಿರುವುದು, ಅಂದರೆ ಪರಮಾತ್ಮನಲ್ಲದೆ ಬೇರೆ ಯಾವ ಉಪಾಯವೂ, ಬೇರೆ ಯಾವ ರಕ್ಷಕರೂ ಇಲ್ಲದಿರುವುದು.)

**121. ಇವ್ವೈ ಇರಂಡುಮ್ ಪ್ರಪನ್ನ ಪ್ರರಿತ್ರಾಣತ್ತಿಲೇ ಶೊನ್ನೋಮ್.**

ಆಕಿಂಚನ್ಯ ಮತ್ತು ಅನನ್ಯಗತಿತ್ವ ಇವೆರಡರ ಲಕ್ಷಣವನ್ನು ಪ್ರಪನ್ನಪರಿತ್ರಾಣವೆಂಬ ಪ್ರಬಂಧದಲ್ಲಿ ಸ್ಪಷ್ಟವಾಗಿ ಹೇಳಿದೆ.

# ದ್ವಯಕ್ಕೆ ವಾಕ್ಯಾರ್ಥ
## (ಸೂತ್ರ 122)

**122.** **ಇದಿಲ್ ಮುರ್ಕೂತ್ತಾಲ್ ಪೆರಿಯ ಪಿರಾಟ್ಟಿಯಾರೈ ಮುನ್ನಿಟ್ಟು ಈಶ್ವರನ್ ತಿರುವಡಿಗಳೈ ಉಪಾಯಮಾಗಪ್ಪತ್ತುಗಿರದು; ಪಿರ್ಕೂತ್ತಾಲ್ ಅಚ್ಚೇರ್ತ್ತಿಯಿಲ್ ಅಡಿಮೈ ಇರಕ್ಕಿರದು.**

ದ್ವಯ ಮಂತ್ರದಲ್ಲಿ ಎರಡು ವಾಕ್ಯಗಳಿವೆ. "ಶ್ರೀಮನ್ನಾರಾಯಣ ಚರಣೌ ಶರಣಂ ಪ್ರಪದ್ಯೇ" ಎಂಬ ಮೊದಲನೆ ವಾಕ್ಯದಲ್ಲಿ "ಶ್ರೀಮತ್" ಎಂದು ಶ್ರೀದೇವಿಯನ್ನು ಪುರುಷಕಾರವಾಗಿ ಮುಂದುಮಾಡಿಕೊಂಡು, "ನಾರಾಯಣಚರಣೌ"—ಎಂದು ಈಶ್ವರನ ಪಾದಕಮಲಗಳನ್ನು "ಶರಣಂ ಪ್ರಪದ್ಯೇ" ಎಂದು ಉಪಾಯವಾಗಿ ಸ್ವೀಕರಿಸುವುದನ್ನು ತಿಳಿಸಿದೆ. "ಶ್ರೀಮತೇ ನಾರಾಯಣಾಯ ನಮಃ" ಎಂಬ ಎರಡನೇ ವಾಕ್ಯದಲ್ಲಿ "ಶ್ರೀಮತೇ ನಾರಾಯಣಾಯ" ಎಂದು ಶ್ರೀಸಹಿತನಾದ ಪರಮಾತ್ಮನ ಕೈಂಕರ್ಯ ಪ್ರಾರ್ಥನೆಯನ್ನೂ, "ನಮಃ" ಎಂದು ಕೈಂಕರ್ಯ ವಿರೋಧಿ ನಿವೃತ್ತಿ ಪ್ರಾರ್ಥನೆಯನ್ನೂ ತಿಳಿಸಿದೆ.

# ದ್ವಯ ಮಂತ್ರಕ್ಕೆ ಪ್ರತಿಪದಾರ್ಥ
# ಶ್ರೀ ಶಬ್ದದ ಅರ್ಥ
## (ಸೂತ್ರಗಳು 123 ರಿಂದ 129)

**123.** **ಶ್ರೀ ಎನ್ರು ಪೆರಿಯ ಪಿರಾಟ್ಟಿಯಾರುಕ್ಕು ತ್ತಿರುನಾಮಮ್.**

ಶ್ರೀ ಎಂಬುದು ಶ್ರೀದೇವಿಯ ದಿವ್ಯವಾದ ಹೆಸರು.

**124.** **ಶ್ರೀಯತೇ ಶ್ರಯತೇ.**

ಶ್ರೀಯತೇ ಶ್ರಯತೇ' ಎಂಬುದು ಈ ಪದದ ಉತ್ಪತ್ತಿ. ಶ್ರೀಯತೇ ಎಂದರೆ ಎಲ್ಲರಿಂದಲೂ ಸೇವೆಯನ್ನು ಹೊಂದುವವಳು ಎಂದು ಅರ್ಥ. ಶ್ರಯತೇ ಎಂದರೆ ಈಶ್ವರನಿಗೆ ಸೇವೆಯನ್ನು ಸಲ್ಲಿಸುವವಳು ಎಂದು ಅರ್ಥ

**125.** **ಇದುಕ್ಕರ್ಥಮ್—ಎಲ್ಲಾರುಕ್ಕುಮ್ ಇವಳೈಪತ್ತಿ ಸ್ವರೂಪ ಲಾಭಮಾಯ್ ಇವಳ್‌ತನಕ್ಕು ಅವನೈಪತ್ತಿ ಸ್ವರೂಪ ಲಾಭಮಾಯ್ ಇರುಕ್ಕುಮೆನ್ರು**

ಸಕಲ ಚೇತನರೂ ಇವಳನ್ನು ಆಶ್ರಯಿಸಿ ತಮ್ಮ ಸ್ವರೂಪಲಾಭವನ್ನು ಪಡೆಯುತ್ತಾರೆ. ಇವಳಿಗೆ ಈಶ್ವರನಿಂದ ಸ್ವರೂಪಲಾಭವು ಉಂಟಾಗುತ್ತದೆ ಎಂದು ಅರ್ಥ.

**126.** **ಇಪ್ಪೋದು ಇವಳೈ ಚೊಲ್ಲುಗಿರದು ಪುರುಷಕಾರಮಾಗ.**

ಈಗ ಇಲ್ಲಿ ಇವಳನ್ನು ವಿವರಿಸುವುದು ಪುರುಷಕಾರವಾಗಿ.

**127.** **ನೀರಿಲೆ ನೆರುಪ್ಪು ಕ್ಕಿಳರುಮಾ ಪೋಲೆ ಕುಳಿರ್‌ನ್ದ ತಿರುವುಳ್ಳತ್ತಿಲೇ ಅಪರಾಧತ್ತಾಲೆ ಶೀತ್ತಮ್ ಪಿರಂದಾಲ್ ಪೊರುಪ್ಪದು ಇವಳುಕ್ಕಾಗ.**

ಪರಮಾತ್ಮನ ಶೀತಳವಾದ ಶಾಂತ ಸ್ವಭಾವದಲ್ಲಿ ಚೇತನರು ಮಾಡುವ ಮಹತ್ತಾದ ಅಪರಾಧಗಳ ಕಾರಣದಿಂದ ಶೀತಳವಾದ ನೀರಿನ ಕೆಳಗೆ ಬೆಂಕಿಯ ಜ್ವಾಲೆಯು ಪ್ರಸರಿಸುವಂತೆ ರೋಷವು ಉಂಟಾದರೆ, ಅವನ ರೋಷವು ಆರಿಸಲ್ಪಟ್ಟು ಅವನು ಅಪರಾಧವನ್ನು ಸಹಿಸುವುದು ಇವಳ ಪುರುಷಕಾರದ ಬಲ ಪ್ರಭಾವದಿಂದ.

**128.** **ಇವಳ್ ತಾಯಾಯ್ ಇವರ್‌ಗಳ್ ಕ್ಲೇಶಮ್ ಪೊರುಕ್ಕಮಾಟ್ಟಾದೇ ಅವನುಕ್ಕು ಪತ್ನಿಯಾಯ್ ಇನಿಯ ವಿಷಯಮಾಯಿರುಕ್ಕೈಯಾಲೇಕಣ್ಣಳಿವತ್ತ ಪುರುಷಕಾರಮ್.**

ಚೇತನರಿಗೆ ಇವಳು ತಾಯಿಯಾಗಿ ಅವರ ಕ್ಲೇಶಗಳನ್ನು ಸಹಿಸಲಾರದವಳಾಗಿರುವುದರಿಂದಲೂ, ಪರಮಾತ್ಮನಿಗೆ ಪತ್ನಿಯಾಗಿ ಅಭಿಮತ ವಸ್ತುವಾಗಿರುವುದರಿಂದಲೂ, ಇವಳದು (ಚೇತನನನ್ನೂ, ಪರಮಾತ್ಮನನ್ನೂ ಸೇರಿಸುವುದಕ್ಕೆ) ತಡೆಗಳಾವುವೂ ಇಲ್ಲದ ಕಾರ್ಯಸಾಧಕವಾದ ಪುರುಷಕಾವಾಗಿರದೆ.

**129. ತಿರುವಡಿಯೈ ಪ್ಪೊರುಪ್ಪಿಕ್ಕ್ಕುಮವಳ್ ತನ್ ಶೊಲ್ ವಳಿವರು-ಮವನೈ ಪ್ಪೊರುಪ್ಪಿಕ್ಕಚ್ಚೊಲ್ಲವೇಂಡಾವಿರೆ.**

(ರಾಕ್ಷಸ ಸ್ತ್ರೀಯರನ್ನು ಚಿತ್ರವಧೆಮಾಡಿ ಹಿಂಸಿಸಲು ಉದ್ದೇಶಿಸಿದ) ವ್ಯಗ್ರನಾದ ಹನುಮಂತನನ್ನೇ ಕೋಪವನ್ನು ಸಹಿಸುವಂತೆ ಮಾಡಿದವಳು ತನ್ನ ಮಾತನ್ನು ಕೇಳುವ ತನ್ನ ಪತಿಯು ಕೋಪವನ್ನು ಸಹಿಸುವಂತೆ ಮಾಡಲು ಸಮರ್ಥಳೆಂಬುದು ಸ್ವತಃ ಸಿದ್ಧವಲ್ಲವೇ?

## ಮತ್ ಪ್ರತ್ಯಯದ ಅರ್ಥ
## (ಸೂತ್ರಗಳು 130 ರಿಂದ 135)

**130. ಮತುಪ್ಪಾಲೇ ಇರುವರ್ ಶೇರ್ತ್ತಿಯುಂವತ್ ನಿತ್ಯಮೆನ್ಗಿರದು.**

'ಮತ್' ಪ್ರತ್ಯಯವು ಶ್ರೀದೇವಿಯೂ ಪರಮಾತ್ಮನೂ ಇಬ್ಬರೂ ಒಬ್ಬರೊಂದಿಗೆ ಒಬ್ಬರು ಜೊತೆಯಾಗಿರುವುದು ನಿತ್ಯವಾದುದು. ಎಂಬ ಅರ್ಥವನ್ನು ತಿಳಿಸುತ್ತದೆ.

**131. ಇವಳೋಡೆಕೂಡಿಯೇ ವಸ್ತುವಿನುಡೈಯ ಉಣ್ಮೈ.**

ಇವಳೊಂದಿಗೆ ಕೂಡಿಯೇ ಪರಮಾತ್ಮನ ಸದ್ಭಾವವಿರುವುದು (ಶ್ರಿಯಃ ಪತಿತ್ವವು ಅವನ ಸ್ವಭಾವಕ್ಕೆ ಪ್ರಧಾನ ನಿರೂಪಕ ಧರ್ಮವಾಗಿದೆ.)

**132. ಈಶ್ವರ ಸ್ವಾತಂತ್ರ್ಯತ್ತೈಯುಂವತ್ ಚೇತನನುಡೈಯ ಅಪರಾಧ-ತ್ತೈಯುಂವತ್ ಕಂಡು ಅಗಲಮಾಟ್ಟಾಳ್.**

ಈಶ್ವರನ ಸ್ವಾತಂತ್ರ್ಯವನ್ನೂ, ಚೇತನನ ಅಪರಾಧಗಳನ್ನೂ ನೋಡಿ ಇವಳು ಒಂದು ಕ್ಷಣವೂ (ಪರಮಾತ್ಮನನ್ನು ಬಿಟ್ಟು) ಅಗಲುವುದಿಲ್ಲ.

**133. ಚೇತನನುಕ್ಕು ಇವ್ವೆಯಿರಂಡೈಯುಂವತ್ ನಿನೈತ್ತು ಅಂಜವೇಂಡಾ.**

ಆದ್ದರಿಂದ ಚೇತನನು (ಪರಮಾತ್ಮನ ಸ್ವಾತಂತ್ರ್ಯವನ್ನೂ ತನ್ನ ಅಪರಾಧವನ್ನೂ) ಇವೆರಡನ್ನೂ ನೆನಸಿ ಭಯಪಡಬೇಕಾಗಿಲ್ಲ.

**134. ಇತ್ತಾಲ್ ಆಶ್ರಯಿಕ್ಕೈಕ್ಕು ರುಚಿಯೇ ವೇಂಡುವದು, ಕಾಲವುಮ್ ಪಾರ್ಕವೇಂಡಾವೆನ್ಗಿರದು.**

(ಶ್ರೀದೇವಿಯ ಮತ್ತು ಪರಮಾತ್ಮನ ನಿತ್ಯಯೋಗವನ್ನು ಪ್ರತಿಪಾದಿಸುವ) ಶ್ರೀಮತ್ ಪ್ರತ್ಯಯದಿಂದ ಇವರನ್ನು ಆಶ್ರಯಿಸುವವರಿಗೆ ಆಶ್ರಯಣದಲ್ಲಿ ರುಚಿಯೇ ಪ್ರಧಾನವಾಗಿ ನೋಡಬೇಕಾದ ಅಂಶವೇ ಹೊರತು ಆಶ್ರಯಣಕ್ಕೆ ಕಾಲವನ್ನು ನೋಡಬೇಕಾಗಿಲ್ಲ. (ಏಕೆಂದರೆ ಶ್ರೀದೇವಿಯು ಸರ್ವದಾ ಪರಮಾತ್ಮನೊಂದಿಗೆ ಇರುವವಳಾಗಿದ್ದಾಳೆ.)

**135. ಇವಳ್ ಸನ್ನಿಧಿಯಾಲೇ ಕಾಕನ್ ತಲೈಪೆತ್ತದು; ಅದಿಲ್ಲಾಮೈಯಾಲೆ ರಾವಣನ್ ಮುಡಿಂದಾನ್.**

ಇವಳ ಸಾನ್ನಿಧ್ಯದಿಂದ (ಪರಮಾತ್ಮನೊಡನೆ ಇವಳು ಇದ್ದುದರಿಂದ) ಅಪರಾಧವನ್ನು ಮಾಡಿದ ಕಾಕಾಸುರನು ಕಾಪಾಡಲ್ಪಟ್ಟನು. ಇವಳು ಪರಮಾತ್ಮನೊಂದಿಗೆ ಇಲ್ಲದಿದ್ದುದರಿಂದ ರಾವಣನು ಹತನಾದನು.

## ನಾರಾಯಣ ಪದದ ಅರ್ಥ
## (ಸೂತ್ರಗಳು 136 ರಿಂದ 143)

**136. ಪುರುಷಕಾರಬಲತ್ತಾಲೇ ಸ್ವಾತಂತ್ರ್ಯಮ್ ತಲೈಶಾಯ್‌ನ್ದಾಲ್ ತಲೈಎಡುಕ್ಕುಮ್ ಗುಣಂಗಳೈ ಚೊಲ್ಲುಗಿರದು ನಾರಾಯಣ ಪದಮ್.**

ಶ್ರೀದೇವಿಯು ಪುರುಷಕಾರ ಬಲದಿಂದ ಈಶ್ವರನ ಸ್ವಾತಂತ್ರ್ಯವು ಕಡಿಮೆಯಾದರೂ ತಲೆ ಎತ್ತುವ ಅವನ ಇತರ ಗುಣಗಳನ್ನು ನಾರಾಯಣ ಪದವು ತಿಳಿಸುತ್ತದೆ.

**137. ಅನ್ವೈಯಾವನ ವಾತ್ಸಲ್ಯಮುಮ್, ಸ್ವಾಮಿತ್ವಮುಮ್, ಸೌಶೀಲ್ಯಮುಮ್, ಸೌಲಭ್ಯಮುಮ್, ಜ್ಞಾನಮುಮ್, ಶಕ್ತಿಯುಮ್.**

ಆ ಗುಣಗಳು ಯಾವುವೆಂದರೆ—ವಾತ್ಸಲ್ಯವು, ಸ್ವಾಮಿತ್ವವು, ಸೌಶೀಲ್ಯವು, ಸೌಲಭ್ಯವು, ಜ್ಞಾನವು ಮತ್ತು ಶಕ್ತಿಯು.

138. **ಕುತ್ತಮ್ ಕಂಡು ವೆರುವಾಮೈಕ್ಕು ವಾತ್ಸಲ್ಯಮ್; ಕಾರ್ಯಮ್ ಶೆಯ್ಯುಮೆನ್ರು ತುಣಿಗೈಕ್ಕು ಸ್ವಾಮಿತ್ವಮ್; ಸ್ವಾಮಿತ್ವಮ್ ಕಂಡು ಅಗಲಾಮೈಕ್ಕು ಸೌಶೀಲ್ಯಮ್; ಕಂಡು ಪತ್ತುಗೈಕ್ಕು ಸೌಲಭ್ಯಮ್; ವಿರೋಧಿಯೈಪ್ಪೋಕ್ಕಿ ತನ್ನೈಕ್ಕೊಡುಕ್ಕೈಕ್ಕು ಜ್ಞಾನಶಕ್ತಿಗಳ್.**

i. **ವಾತ್ಸಲ್ಯ**—(ನಮ್ಮ ದೋಷಗಳನ್ನು ಭೋಗ್ಯವಾಗಿ ಕಾಣುವ ಪ್ರೀತಿಯೇ ವಾತ್ಸಲ್ಯವು)—ಈ ಗುಣವು ಚೇತನನು ತನ್ನ ದೋಷಗಳನ್ನು ನೋಡಿ ಭಯಪಡದೆ ಇರುವುದಕ್ಕೆ ಸಹಾಯಕವಾಗಿದೆ.

ii. **ಸ್ವಾಮಿತ್ವ**—(ಚೇತನನನ್ನು ರಕ್ಷಿಸುವ ಬಂಧ ವಿಶೇಷತ್ವವೇ ಸ್ವಾಮಿತ್ವವು)—ಈ ಗುಣವು ಪರಮಾತ್ಮನು ನಮ್ಮ ಕೆಲಸಗಳನ್ನೂ, ಅಭೀಷ್ಟಗಳನ್ನೂ ನೆರವೇರಿಸಿಯೇ ನೆರವೇರಿಸುವನು ಎಂಬ ದೃಢ ಸಂಬಿಕೆಯನ್ನು ಹುಟ್ಟಿಸಲು ಸಹಾಯಕವಾಗಿದೆ.

iii. **ಸೌಶೀಲ್ಯ**—(ತನ್ನ ಮೇಲ್ಮೆಯನ್ನೂ, ಇತರರ ಕೀಳುತನವನ್ನೂ ನೋಡದೆ, ಎಲ್ಲರೊಂದಿಗೂ ಕಲೆಯುವಿಕೆಯೇ ಸೌಶೀಲ್ಯವು) ಈಶ್ವರನ ಸ್ವಾಮಿತ್ವವನ್ನು ನೋಡಿ (ನಮ್ಮ ಕೀಳುತನದಿಂದ) ನೈಚ್ಯಾನುಸಂಧಾನ ಮಾಡಿ ಹಿಂತೆಗೆಯದೆ ಇರುವುದಕ್ಕೆ ಸೌಶೀಲ್ಯವು ಸಹಾಯಕವಾಗಿದೆ.

iv. **ಸೌಲಭ್ಯವು**—(ಚೇತನನು ತನ್ನ ಕಣ್ಣಿನಿಂದ ನೋಡಿ ಆಶ್ರಯಿಸುವುದಕ್ಕೆ ಸುಲಭನಾಗಿರುವುದು ಸೌಲಭ್ಯವು) ಚೇತನನು (ಅರ್ಚಾರೂಪಿಯಾದ ಪರಮಾತ್ಮನನ್ನು) ತನ್ನ ಕಣ್ಣಿನಿಂದ ನೋಡಿ ಆಶ್ರಯಿಸಲು ಈ ಸೌಲಭ್ಯವು ಸಹಕಾರಿಯಾಗಿದೆ.

v+vi. **ಜ್ಞಾನ ಮತ್ತು ಶಕ್ತಿಯು**—ವಿರೋಧಿಗಳನ್ನು ನಿರಸನ ಮಾಡಿ ತನ್ನ (ಪರಮಾತ್ಮನ) ಪ್ರಾಪ್ತಿಯನ್ನು ಕೊಟ್ಟು ಅನುಗ್ರಹಿಸುವುದಕ್ಕೆ ಈ ಗುಣಗಳು ಸಹಕಾರಿಯಾಗಿವೆ.

139 **ಇಂಗುಚ್ಚೊನ್ನ ಸೌಲಭ್ಯತ್ತುಕ್ಕು ಎಲ್ಲೈನಿಲಮ್ ಅರ್ಚಾವತಾರಮ್.**

ಇಲ್ಲಿ ಹೇಳಿರುವ ಸೌಲಭ್ಯಗುಣಕ್ಕೆ ಅರ್ಚಾವತಾರವೇ ಸೀಮಾಭೂಮಿ

ಯಾಗಿದೆ. (ಅಂದರೆ ಇದು ನಮಗೆ ಸನ್ನಿಹಿತವಾದುದಾಗಿಯೂ ಅನವರತ ನಮ್ಮ ಕಣ್ಣಿಗೆ ಕಾಣುವಂತಹುದಾಗಿಯೂ ಇದೆ.)

**140. ಇದುತಾನ್ ಪರವ್ಯೂಹವಿಭವಂಗಳ್ ಪೋಲನ್ರಿಕ್ಕೇ ಕಣ್ಣಾಲೆ ಕಾಣಲಾಂಬಡಿ ಇರುಕ್ಕುಮ್.**

ಈ ಅರ್ಚಾವತಾರವು ಪರವ್ಯೂಹವಿಭವಾದಿಗಳಂತೆ ಇಲ್ಲದೆ ಕಣ್ಣಿಗೆ ಕಾಣು ವಂತೆ ಪ್ರತ್ಯಕ್ಷವಾಗಿದೆ.

**141. ಇವೈಯೆಲ್ಲಾಮ್ ನಮಕ್ಕು ನಂಬೆರುಮಾಳ್ ಪಕ್ಕಲಿಲೇ ಕಾಣಲಾಮ್.**

ಮೇಲೆ ಹೇಳಿದ ವಾತ್ಸಲ್ಯಾದಿಗುಣಗಳೆಲ್ಲವನ್ನೂ ನಾವು ಶ್ರೀರಂಗನಾಥ ಸ್ವಾಮಿಯ ಹತ್ತಿರ ಕಾಣಬಹುದು.

**142. ತಿರುಕ್ಕೈಯಿಲೇ ಪಿಡಿತ್ತ ದಿವ್ಯಾಯುಧಂಗಳುಮ್, ವೈತ್ತಂಜಲೆನ್ರ ಕೈಯುಮ್, ಕವಿತ್ತ ಮುಡಿಯುಮ್, ಮುಖಮುಮ್ ಮುರುವಲುಮ್, ಆಸನಪದ್ಮತ್ತಿಲೇ ಅಳುತ್ತಿನ ತಿರುವಡಿಗಳುಮಾಯ್ ನಿರ್ಕಿರನಿಲೈಯೇ ನಮಕ್ಕು ತ್ತಂಜಮ್.**

ತಿರುಕ್ಕೈಗಳಲ್ಲಿ ಧರಿಸಿಕೊಂಡಿರುವ ಶಂಖಚಕ್ರಾದಿ ದಿವ್ಯಾಯುಧಗಳೂ(ಇವು ಜ್ಞಾನ ಶಕ್ತ್ಯಾದಿಗುಣಗಳಿಗೆ ಪ್ರಕಾಶಕವಾಗಿವೆ.); ಭಯಪಡಬೇಡಿರೆಂದ ಅಭಯಪ್ರದಾನ ಮುದ್ರಾಧಾರಣೆಯಿಂದಿರುವ ತಿರುಕ್ಕೈಯೂ (ಇದು ವಾತ್ಸಲ್ಯಗುಣ ಪ್ರಕಾಶಕವಾಗಿದೆ); (ತಲೆಯಲ್ಲಿಧರಿಸಿರುವ) ಕಿರೀಟವೂ (ಇದು ಸ್ವಾಮಿತ್ವಕ್ಕೆ ಪ್ರಕಾಶಕವಾಗಿದೆ); ಉಲ್ಲಾಸವಾದ ಮುಖವೂ, ಮಂದಸ್ಮಿತವೂ (ಇವು ಸೌಶೀಲ್ಯವನ್ನು ಪ್ರಕಾಶಪಡಿಸುತ್ತವೆ); ಪದ್ಮಾಸನದ ಮೇಲೆ ನಿಂತಿರುವ ಚರಣಕಮಲಗಳೂ (ಇವು ಪ್ರತ್ಯಕ್ಷವಾಗಿ ಕಾಣಲು ಸುಲಭವಾಗಿರುವುದರಿಂದ ಸೌಲಭ್ಯವನ್ನು ಪ್ರಕಾಶಪಡಿಸುತ್ತವೆ.) ಇವುಗಳೊಂದಿಗೆ ನಿಂತಿರುವ ನೆಲೆಯೇ ನಮಗೆಲ್ಲಾ ರಕ್ಷಕವಾಗಿದೆ.

**143. ರಕ್ಷಕತ್ವಭೋಗ್ಯತ್ವಂಗಳಿರಂಡುಮ್ ತಿರುಮೇನಿಯಿಲೇ ತೋಱ್ರುಮ್.**

ರಕ್ಷಕತ್ತ್ವವೂ, ಭೋಗ್ಯತ್ವವೂ, ಎರಡೂ ದಿವ್ಯಮಂಗಳ ವಿಗ್ರಹದಲ್ಲಿ ಪ್ರಕಾಶಿಸುತ್ತವೆ. (ರಕ್ಷಣೆಗೆ ಪರಿಕರಗಳಾದ ದಿವ್ಯಾಯುಧಗಳೂ, ಕಿರೀಟಾದಿಗಳೂ, ರಕ್ಷಕತ್ವವನ್ನು ಪ್ರಕಾಶಿಸುತ್ತವೆ. ಸೌಂದರ್ಯವನ್ನು ಪ್ರಕಾಶಿಸುವ 'ಅಂಜೇಲ್' ಎಂಬ ಕೈಯೂ, ಉಲ್ಲಾಸವಾದ ಮುಖವೂ, ಮಂದಸ್ಮಿತವೂ ಪದ್ಮಾಸನದಲ್ಲಿರುವ ಪಾದಕಮಲಗಳೂ ಭೋಗ್ಯತ್ವವನ್ನು ಪ್ರಕಾಶಪಡಿಸುತ್ತವೆ.)

## ಚರಣೌ ಪದದ ಅರ್ಥ
### (ಸೂತ್ರಗಳು 144 ರಿಂದ 148)

**144.** **"ಚರಣೌ"—ತಿರುವಡಿಗಳೈ.**

'ಚರಣೌ' ಅಂದರೆ ಪಾದಕಮಲಗಳನ್ನು.

**145.** **ಇತ್ತಾಲ್ ಶೇರ್‌ತ್ತಿ ಅಳಗೈಯುಂವ್ ಉಪಾಯಪೂರ್ತಿಯೈ-ಯುಂವ್ ಶೊಲ್ಲುಗಿರದು.**

ಇದರಿಂದ (ಚರಣೌ ಎಂಬ ದ್ವಿವಚನದಿಂದ) ಪಾದಕಮಲಗಳ ಸೌಂದರ್ಯವೂ ಮತ್ತು ಇವರಡಕ್ಕಿಂತ ಬೇರೆ ಮತ್ತೊಂದು ಉಪಾಯವಿಲ್ಲವೆಂಬ ಉಪಾಯಪೂರ್ತಿಯೂ ತಿಳಿಸಲ್ಪಡುತ್ತದೆ.

**146.** **ಪಿರಾಟ್ಟಿಯುಂವ್ ಅವನುಂವ್ ವಿಡಿಲುಂವ್ ತಿರುವಡಿಗಳ್ ವಿಡಾದು; ತಿಣ್‌ಕಳಲಾಯಿರುಕ್ಕುಂವ್.**

ಶ್ರೀದೇವಿಯೂ, ಪರಮಾತ್ಮನೂ ಕೈಬಿಟ್ಟರೂ ಈ ಪಾದಕಮಲಗಳು ಕೈಬಿಡುವುದಿಲ್ಲ. ಅವು ದೃಢವಾದ ಉಪಾಯವಾಗಿವೆ.

**147.** **ಶೇಷಿಪಕ್ಕಲ್ ಶೇಷಭೂತನಿಳಿಯುಂವ್ ತುರ್ಕೈ; ಪ್ರಜೈ ಮುಲೈ-ಯಿಲೇ ವಾಯ್‌ವೈಕ್ಕುಮಾಪೋಲೇ.**

ಹಾಲು ಕುಡಿಯುವ ಶಿಶುವು ತನ್ನ ತಾಯಿಯ ಬಳಿ ಸ್ತನ್ಯಪಾನವನ್ನು ಮಾಡುವಂತೆ ಶೇಷಭೂತನಾದ ಚೇತನನು ಶೇಷಿಯಾದ ಪರಮಾತ್ಮನನ್ನು ಆಶ್ರಯಿಸಲು ಅವನ ಚರಣಕಮಲಗಳು ಯೋಗ್ಯವಾದ ಘಟ್ಟವಾಗಿವೆ.

**148. ಇತ್ತಾಲ್ ಪಿರಾಟ್ಟಿಕ್ಕು ಇರುಪ್ಪಿಡಮಾಯ್ ಗುಣ ಪ್ರಕಾಶಕಮುಮಾಯ್ ಶಿಶುಪಾಲನೈಯುಮ್ ಅಗಪ್ಪಡ ತ್ತಿರುತ್ತಿಚ್ಚೇರ್‌ತ್ತುಕ್ಕೊಳ್ಳುಮ್ ತಿರುಮೇನಿಯೈ ನಿನೈಕ್ಕಿರದು.**

ಚರಣೌ ಎಂದು ಹೇಳಿರುವ ಈ ಪಾದಗಳಿಂದ ಶ್ರೀದೇವಿಗೆ ವಾಸಸ್ಥಾನವಾದ, ಗುಣಗಳಿಗೆ ಪ್ರಕಾಶವಾದ, ತನ್ನನ್ನು ದೂಷಿಸಿದ ಶಿಶುಪಾಲನನ್ನೂ ಕೂಡ ತನ್ನ ಸೌಂದರ್ಯದಿಂದ ದ್ವೇಷಾದಿಗಳನ್ನು ನಾಶಪಡಿಸಿ ತನ್ನಲ್ಲಿ ಸೇರಿಕೊಳ್ಳುವಂತಹ ಸ್ವಭಾವವುಳ್ಳ ಪರಮಾತ್ಮನ ದಿವ್ಯಮಂಗಳ ವಿಗ್ರಹವನ್ನು ನೆನೆಸಿಕೊಳ್ಳುವುದು ಎಂದು ಅರ್ಥ. (ಪಾದಗಳನ್ನು ಹೇಳಿರುವ ಈ ಚರಣೌ ಎಂಬ ಪದವು ಅವನ ದಿವ್ಯಮಂಗಳ ವಿಗ್ರಹವನ್ನೇ ನೆನೆಸುವಂತೆ ಮಾಡುತ್ತದೆ ಎಂದು ಅಭಿಪ್ರಾಯ.)

## ಶರಣಂ ಎಂಬ ಪದದ ಅರ್ಥ

## (ಸೂತ್ರಗಳು 149 ರಿಂದ 153)

**149. "ಶರಣಂ"—ಇಷ್ಟ ಪ್ರಾಪ್ತಿಕ್ಕುಮ್, ಅನಿಷ್ಟನಿವಾರಣತ್ತುಕ್ಕುಮ್ ತಪ್ಪಾದ ಉಪಾಯಮಾಗ.**

ಶರಣಂ ಎಂದರೆ ಇಷ್ಟವನ್ನು ಉಂಟುಮಾಡುವುದಕ್ಕೂ ಅನಿಷ್ಟಗಳನ್ನು ನಿವಾರಣೆ ಮಾಡುವುದಕ್ಕೂ ಇದು ಒಳ್ಳೆಯ ಫಲಕಾರಿಯಾದ ಉಪಾಯವಾಗಿದೆ ಎಂದು ಅರ್ಥ.

**150. ಇತ್ತಾಲ್ ಪ್ರಾಪ್ಯಂದಾನೇ ಪ್ರಾಪಕಮೆನ್ಗಿರದು.**

ಹೀಗೆ ಪರಮಾತ್ಮನ ಪಾದಕಮಲಗಳನ್ನೇ ಉಪಾಯವಾಗಿ ಹೇಳಿರುವುದೆ

ರಿಂದ ಪ್ರಾಪ್ಯವಾದ (ನಾವು ಹೊಂದಬೇಕಾದ ಫಲವಾದ) ಶ್ರೀಮನ್ನಾರಾಯಣನೇ ಪ್ರಾಪಕನಾಗಿದ್ದಾನೆ—(ಅಂದರೆ ನಾವು ಆಶ್ರಯಿಸಬೇಕಾದ ಉಪಾಯುವಾಗಿದ್ದಾನೆ) ಎಂಬುದು ತಿಳಿಸಲ್ಪಡುತ್ತದೆ.

**151. ಕೀಳ್‌ಚೊನ್ನ ಮೂನ್ರುಮ್ ಪ್ರಾಪ್ಯನಿಃರೇ.**

(ಕೆಳಗೆ ಶ್ರೀಮತ್ ಪದದಿಂದ ಹೇಳಲ್ಪಟ್ಟ ಲಕ್ಷ್ಮೀ ವಿಶಿಷ್ಟತ್ವವೂ, ನಾರಾಯಣ ಪದದಿಂದ ಹೇಳಲ್ಪಟ್ಟ ಕಲ್ಯಾಣಗುಣಯೋಗವೂ, ಚರಣೌ ಎಂಬ ಪದದಿಂದ ಹೇಳಲ್ಪಟ್ಟ ದಿವ್ಯಮಂಗಳ ವಿಗ್ರಹದಿಂದ ಕೂಡಿರುವಿಕೆಯೂ) ಇವು ಮೂರೂ (ಚೇತನನಿಗೆ ಅನುಭವ ವಿಷಯುಗಳಾಗಿರುವುದರಿಂದ) ಪ್ರಾಪ್ಯವಸ್ತುಗಳಾಗಿವೆ.

**152. ಇವನ್ ಶೆಯಲರುದಿಯಾಲೇ ಉಪಾಯಂಪವಾಕ್ಕುಗಿರಃ ನಿಕ್ಕನ್ನೈ**

ಚೇತನನು ತನ್ನ ರಕ್ಷಣೆಯಲ್ಲಿ ಸ್ವಯತ್ನವಾಗಲೀ, ಪರಯತ್ನವಾಗಲೀ ಯಾವುದೂ ಇಲ್ಲದವನಾಗಿರುವುದರಿಂದ ಇವುಗಳನ್ನೇ ಉಪಾಯವಾಗಿ ಆಶ್ರಯಿಸುತ್ತಾನೆ.

**153. "ಚರಣೌ ಶರಣಮ್" ಎನ್‌ಗೈಯಾಲೇ ಉಪಾಯಾಂತರ ವ್ಯಾವೃತ್ತಮಾನ ಉಪಾಯುಮೆನ್ಗಿರದು.**

'ಚರಣೌ–ಶರಣಂ'—ಎಂದು ಪ್ರಾಪ್ಯ ವಸ್ತುವಾದ (ಉಪೇಯುವಾದ. ಪಾದಕಮಲಗಳನ್ನೇ ಪ್ರಾಪಕವಾಗಿ (ಉಪಾಯವಾಗಿ) ಹೇಳಿರುವುದರಿಂದ ಫಲವೇ ಬೇರೆ, ಉಪಾಯುವೇ ಬೇರೆಯಾಗಿರುವ ಇತರ ಉಪಾಯುಗಳಿಗಿಂತ ಇದು ಬೇರೆಯಾಗಿದೆ. (ಅಂದರೆ ಪ್ರಾಪ್ಯ ಪ್ರಾಪಕ ಅಂದರೆ) ಉಪಾಯ ಉಪೇಯ ಎರಡೂ ಒಂದೇ ಆಗಿದೆ—ಇದು ಪರಮಾತ್ಮನ ಉಪಾಯದ ಅತಿಶಯವು.)

# 'ಪ್ರಪದ್ಯೆ' ಎಂಬ ಪದದ ಅರ್ಥ
## (ಸೂತ್ರಗಳು 154 ರಿಂದ 159)

**54. "ಪ್ರಪದ್ಯೇ"=ಪತ್ತುಗಿರೇನ್.**

'ಪ್ರಪದ್ಯೇ'—ಎಂದರೆ ಆಶ್ರಯಿಸುತ್ತೇನೆ ಎಂದು ಅರ್ಥ.

**155. ವಾಚಿಕಮಾಗವುಮ್, ಕಾಯಿಕಮಾಗವುಮ್, ಪತ್ತಿನಾಲುಮ್ ಪೇತ್ತುಕ್ಕು ಅಳಿವಿಲ್ಲೈ; ಜ್ಞಾನಾನ್ಮೋಕ್ಷಮಾಗೈಯಾಲೇ ಮಾನಸಮಾಗಕ್ಕಡವದು.**

("ನೀನೇ ನನಗೆ ತಕ್ಷಕನಾಗಬೇಕು" ಎಂದು) ಕೇವಲ ವಾಚಿಕವಾಗಿ ಪ್ರಾರ್ಥಿಸಿದರೂ, (ಅಂಜಲಿಯನ್ನೂ, ಪ್ರಣಾಮಾದಿಗಳನ್ನೂ ಮಾಡಿ) ಕಾಯಿಕವಾಗಿ ಆಶ್ರಯಿಸಿದರೂ, ಫಲಪ್ರಾಪ್ತಿಗೆ ಕೊರತೆ ಇಲ್ಲ. ಆದರೆ ಜ್ಞಾನದಿಂದ ಮೋಕ್ಷ ಎಂದು ಹೇಳಿರುವುದರಿಂದ ಮಾನಸವಾಗಿ ಆಶ್ರಯಿಸುವುದೇ ಆಶ್ರಯಣವೆನ್ನಿಸಿಕೊಳ್ಳುತ್ತದೆ.

**156. ಉಪಾಯಮ್ ಅವನಾಗೈಯಾಲುಮ್ ಇವೈ ನೇರೇ ಉಪಾಯಮಲ್ಲಾಮೈಯಾಲುಮ್, ಇಮ್ಮೂನ್ರುಮ್ ವೇಣುಮ್ ಎನ್ಗಿರ ನಿರ್ಬಂಧಮಿಲ್ಲೈ.**

ಫಲಸಿದ್ಧಿಗೆ ಅವನೇ ಉಪಾಯವಾಗಿ ಇರುವುದರಿಂದಲೂ, ಇವುಗಳು (ಅಂದರೆ ತ್ರಿವಿಧ ಕರಣಗಳಿಂದ ಕಾಯೇನ ವಾಚಾ ಮನಸಾ ಆಶ್ರಯಿಸುವುದು) ಸಾಕ್ಷಾತ್ ಉಪಾಯವಾಗಿ ಇಲ್ಲದೇ ಇರುವುದರಿಂದಲೂ, ಇವು ಮೂರೂ ಇರಲೇಬೇಕೆಂಬ ನಿರ್ಬಂಧವಿಲ್ಲ. (ಈ ಶರಣಾಗತಿಯು ಕಾಯಿಕ ವಾಚಿಕ ಮಾನಸಿಕಾದಿ ಕರಣತ್ರಯಗಳಿಂದ ಮಾಡಲ್ಪಟ್ಟರೂ ಸರಿ, ಏಕ ಕರಣದಿಂದ ಮಾಡಲ್ಪಟ್ಟರೂ ಸರಿ, ಫಲಸಿದ್ಧಿಯಲ್ಲಿ ಯಾವ ವ್ಯತ್ಯಾಸವೂ ಇಲ್ಲ. ಅಂದರೆ ಫಲಸಿದ್ಧಿಗೆ ಏಕಕರಣ ಶರಣಾಗತಿಯೇ ಸಾಕು ಎಂದೆ ಹೇಳಿದ್ದಾರೆ.)

**157. ವರ್ತಮಾನ ನಿರ್ದೇಶವಮ್ ಸತ್ವಮ್ ತಲೈಯೆಡುತ್ತು ಅಂಜಿನ-ಪೋದು ಅನುಸಂಧಿಕ್ಕೈಕ್ಕಾಗ.**

(ಶರಣಾಗತಿಯು ಒಂದೇ ಸಲ ಮಾಡಬೇಕಾದುದಾಗಿದ್ದಾಗ್ಯೂ) ಪ್ರಪದ್ಯೆ ಅಂದರೆ ಶರಣಾಗತಿ ಮಾಡುತ್ತೇನೆ ಎಂದು ಇಲ್ಲಿ ವರ್ತಮಾನ ಕಾಲ ಹೇಳಿರುವುದು ಏತಕ್ಕೆಂದರೆ ಚೇತನನಲ್ಲಿ ಸತ್ವಗುಣವು ತಲೆಯೆತ್ತಿ ಅನು ತಾಪ ಹುಟ್ಟಿ ಭಯಪಡುವ ಕಾಲದಲ್ಲಿ ಮೊದಲು ಮಾಡಿದ ಶರಣಾಗತಿ ಯನ್ನೇ ಮತ್ತೆ ಮತ್ತೆ ಅನುಸಂಧಾನ ಮಾಡುವುದಕ್ಕಾಗಿ ವರ್ತಮಾನ ಕಾಲದಲ್ಲಿ ಹೇಳಿದೆ.

**158. ಉಪಾಯಾಂತರಂಗಳಿಲ್ ನೆಂಜುಶೆಲ್ಲಾಮೈಕ್ಕುಮ್ ಕಾಲ-ಕ್ಷೇಪತ್ತುಕ್ಕುಮ್ ಇನಿಮೈಯಾಲೇ ವಿಡವೊಣ್ಣಾಮೈಯಾಲುಮ್ ನಡಕ್ಕುಮ್.**

ಅದೂ ಅಲ್ಲದೆ ಉಪಾಯಾಂತರಗಳಲ್ಲಿ ಮನಸ್ಸು ಹೋಗದಂತೆ ತಡೆಯು ವುದಕ್ಕಾಗಿಯೂ, ಇದರ ಅನುಸಂಧಾನದ ಮೂಲಕ ಹೊತ್ತು ಕಳೆಯು ವುದಕ್ಕಾಗಿಯೂ, ಇದರ ಅನುಸಂಧಾನವು ಪರಮಭೋಗ್ಯವಾಗಿರುವುದ ರಿಂದ ಇದನ್ನು ಬಿಡಲಾಗದೇ ಇರುವುದರಿಂದಲೂ ಇದರ ಅನುಸಂಧಾನವು ಎಡಬಿಡದೆ ನಡೆಯತಕ್ಕದ್ದಾಗಿದೆ.

**159. ಪೇತುಕ್ಕಪ್ಪಲಕಾಲುಮ್ ವೇಣುಮೆನ್ರು ನಿನೈಕ್ಕಿಲ್ ಉಪಾಯಮ್ ನಳುವುಮ್.**

(ಮೇಲೆ ವಿವರಿಸಿದ ಪ್ರಯೋಜನಗಳಿಗಾಗಿ ಅಲ್ಲದೆ) ಫಲಪ್ರಾಪ್ತಿಗಾಗಿ ಅನೇಕ ಸಲ ದ್ವಯಾನುಸಂಧಾನ ಮಾಡಬೇಕೆಂದು ನೆನೆಸಿದರೆ ಸಿದ್ಧೋ ಪಾಯವು (ಶರಣಾಗತಿಯು) ಕಾರ್ಯಕಾರಿಯಾಗುವುದಿಲ್ಲ. (ತಾನು ಮಾಡುವ ಶರಣಾಗತಿಯಲ್ಲಿ ಉಪಾಯಭಾವವನ್ನು ಹೊಂದಕೂಡದು.)

# ಎರಡನೆಯ ವಾಕ್ಯ

## ಶ್ರೀಮತೇ ನಾರಾಯಣಾಯ ನಮಃ

## (ಸೂತ್ರಗಳು 160 ರಿಂದ 164)

**160. ಉತ್ತರ ವಾಕ್ಯತ್ತಾಲೇ ಪ್ರಾಪ್ಯಮ್ ಶೊಲ್ಲುಗಿರದು.**

ಈ ಉತ್ತರ ವಾಕ್ಯದಲ್ಲಿ ಅಂದರೆ ಎರಡನೆಯ ವಾಕ್ಯದಲ್ಲಿ ಪುರುಷಾರ್ಥ ವನ್ನು ಹೇಳಿದೆ.

**161. ಪ್ರಾಪ್ಯಾಂತರತ್ತುಕ್ಕು ಅನ್ರೆನ್ಗೈ.**

(ಪೂರ್ವ ವಾಕ್ಯದಲ್ಲಿ ತಿಳಿಸಿದ) ಶರಣಾಗತಿಯು ಭಗವತ್ಕೈಂಕರ್ಯ ಕ್ಕಾಗಿಯೇ ವಿನಃ ಬೇರೆ ಯಾವ ಇತರ ಫಲಕ್ಕಾಗಿಯೂ ಅಲ್ಲ.

**162. ಉಪಾಯಾಂತರಂಗಳೈ ವಿಟ್ಟು ಚರಮೋಪಾಯತ್ತೈ ಪತ್ತಿನಾ-ಪ್ಪೋಲೇ ಉಪೇಯಾಂತರಮಾನ ಐಶ್ವರ್ಯಕೈವಲ್ಯಂಗಳೈ ವಿಟ್ಟು ಎಲ್ಲೈಯಾನ ಪ್ರಾಪ್ಯತ್ತೈ ಅರ್ಥಿಕ್ಕಿರದು.**

(ಉಪಾಯ ಸ್ವೀಕಾರ ಮಾಡುವಾಗ) ಕರ್ಮ, ಜ್ಞಾನ, ಭಕ್ತಿ ಮುಂತಾದ ಉಪಾಯಾಂತರಗಳನ್ನು ಬಿಟ್ಟು ಚರಮೋಪಾಯವಾದ ಪ್ರಪತ್ತಿಯನ್ನು ಸ್ವೀಕರಿಸಿದಂತೆ, ಈಗ ಉಪೇಯ ಪ್ರಾರ್ಥನೆ ಅಂದರೆ ಪುರುಷಾರ್ಥ ಪ್ರಾರ್ಥನೆ ಮಾಡುವ ಸಮಯದಲ್ಲಿ, ಉಪೇಯಾಂತರಗಳಾದ ಐಶ್ವರ್ಯ ಕೈವಲ್ಯಾದಿಗಳನ್ನು ಬಿಟ್ಟು ಚರಮವಾದ (ಕೊನೆಯದಾದ) ಪ್ರಾಪ್ಯವನ್ನು ಅಂದರೆ ಭಗವತ್ಕೈಂಕರ್ಯವನ್ನು ಪ್ರಾರ್ಥಿಸುವುದು.

**163. ಇವನರ್ಥಿಕ್ಕ ವೇಣುಮೋ? ಸರ್ವಜ್ಞನ್ ಇವನ್ನಿನೈವರಿಯಾ-ನೋವೆನ್ನಿಲ್.**

ಇವನ ಮನಸ್ಸಿನ ಪ್ರಾರ್ಥನೆಯನ್ನು ಈಶ್ವರನು ತಿಳಿಯಲಾರನೋ ಇವನು ಅದನ್ನು ಪ್ರಾರ್ಥಿಸಬೇಕೋ ಎಂದರೆ

**164. ಇವನ್ ಪಾಶುರವುಮ್ ಕೇಟ್ಟವಾರೇ ತಿರುವುಳ್ಳಮ್ ಉಗಕ್ಕುಮ್.**

ಇವನ ಪ್ರಾರ್ಥನೆಯನ್ನು ಕೇಳಿ ಅವನ ಮನಸ್ಸು ಆನಂದಗೊಳ್ಳುತ್ತದೆ. (ಅನಾದಿ ಕಾಲ ಪ್ರಾಪ್ಯಾಂತರ ಪ್ರಾವಣ್ಯವೆಂಬ ರೋಗಹೊಂದಿ ಭಗವತ್ ಕೈಂಕರ್ಯವೆಂಬ ಈ ಪರಮಪುರುಷಾರ್ಥದಲ್ಲಿ ರುಚಿಯಿಲ್ಲದೆ ಇದ್ದ ಈ ಚೇತನನು ಇದರಲ್ಲಿ ರುಚಿಹೊಂದಿ ತನ್ನ ಬಳಿಗೆ ಬಂದು ಇದನ್ನು ಅಪೇಕ್ಷಿಸುವ ಪ್ರಾರ್ಥನೆಯನ್ನು ಕೇಳಿದೊಡನೆ ಶೇಷಿಯಾದ ಅವನ ಹೃದಯವು ಆನಂದಗೊಳ್ಳುವುದು; ಆದ್ದರಿಂದ ಪ್ರಾರ್ಥಿಸಬೇಕು ಎಂದು ಹೇಳಿದೆ.)

## ಶ್ರೀಮತೇ ನಾರಾಯಣಾಯ ನಮಃ
## ಎಂಬ ಎರಡನೆಯ ವಾಕ್ಯದ ಪದಾರ್ಥ
## ಶ್ರೀಮತೇ ಪದದ ಅರ್ಥ
## (ಸೂತ್ರಗಳು 165 ರಿಂದ 170)

**165. "ಶ್ರೀಮತೇ"**

ಶ್ರೀಮತೇ ಎಂದರೆ

**166. ಪೆರಿಯಪಿರಾಟ್ಟಿಯಾರೋಡೇ ಕೂಡಿಯಿರುಂದುಳ್ಳವನುಕ್ಕು.**

ಲಕ್ಷ್ಮೀದೇವಿಯೊಡನೆ ಕೂಡಿ ಇರುವವನು ಎಂದು ಅರ್ಥ. (ಪೂರ್ವ ವಾಕ್ಯದಲ್ಲಿ ಶ್ರೀಮತ್ ಪದಕ್ಕೆ ಹೇಳಿದ ಅರ್ಥಗಳನ್ನು ಈ ಉತ್ತರ ವಾಕ್ಯದಲ್ಲೂ ಅನುಸಂಧಾನ ಮಾಡತಕ್ಕದ್ದು.)

**167. ಅವನ್ ಉಪಾಯಮಾಮಿಡತ್ತಿಲ್ ತಾನ್ ಪುರುಷಕಾರಮಾಯಿರುಕ್ಕುಮ್; ಅವನ್ ಪ್ರಾಪ್ಯನಾಮಿಡತ್ತಿಲ್ ತಾನ್ ಪ್ರಾಪ್ಯೈಯುಮಾಯ್ ಕೈಂಕರ್ಯವರ್ಧಿಕೈಯುಮಾಯ್ ಇರುಕ್ಕುಮ್.**

ಅವನು ಚೇತನರಿಗೆ (ಅನಿಷ್ಟ ನಿವೃತ್ತಿ ಇಷ್ಟ ಪ್ರಾಪ್ತಿಗೆ) ಉಪಾಯನಾಗಿರುವ ಸಂದರ್ಭಗಳಲ್ಲಿ (ಚೇತನರ ಅಪರಾಧಗಳನ್ನು ನೋಡಿ ಕೋಪ

ಗೊಳ್ಳದೆ ಅವುಗಳನ್ನು ಸಹಿಸಿ ಅಂಗೀಕರಿಸುವಂತೆ ಮಾಡುವವಳಾಗಿ) ಇವಳು ಪುರುಷಕಾರವಾಗಿ ಇರುತ್ತಾಳೆ.

ಅವನು ಚೇತನರ ಕೈಂಕರ್ಯವನ್ನು ಸ್ವೀಕರಿಸುವವನಾಗಿ ಪ್ರಾಪ್ಯನಾಗಿರುವ ಸಂದರ್ಭದಲ್ಲಿ ಅವನಂತೆ ತಾನೂ ಕೈಂಕರ್ಯ ಪ್ರತಿಸಂಬಂಧಿಯಾಗಿದ್ದು ಕೊಂಡು ಪ್ರಾಪ್ಯೆಯು ಆಗಿ (ಇವರುಗಳು ಮಾಡುವ ಕೈಂಕರ್ಯಗಳು ಆವನ ಹೃದಯದಲ್ಲಿ ಒಂದು ಹತ್ತಾಗುವಂತೆ ಮಾಡಿ) ಕೈಂಕರ್ಯ ವರ್ಧಿಕೆ ಯಾಗಿ ಇರುತ್ತಾಳೆ.

**168. ಇದಿಲೇ ತಿರುಮಂತ್ರತ್ತಿಲ್ ಶೊನ್ನ ಪ್ರಾಪ್ಯತ್ತೈ ವಿಶದಮಾಗ ಅನುಸಂಧಿಕ್ಕಿರದು.**

ಇದರಲ್ಲಿ ಅಂದರೆ ಈ ಉತ್ತರ ವಾಕ್ಯದಲ್ಲಿ ತಿರುಮಂತ್ರದಲ್ಲಿ ಹೇಳಿರುವ ಪ್ರಾಪ್ಯವನ್ನು ವಿಶದವಾಗಿ ತಿಳಿಸಿದೆ. (ತಿರುಮಂತ್ರದಲ್ಲಿ ನಾರಾಯಣಾಯ ಎಂಬುದಕ್ಕೆ ಶ್ರೀ ಸಹಿತನಾದ ಭಗವಂತನಿಗೆ ಕೈಂಕರ್ಯ ಮಾಡಬೇಕು ಎಂಬುದು ಅರ್ಥವಾಗಿ ಹೇಳಿದೆ. ಆದರೆ ಅದನ್ನು ವಿಶದವಾಗಿ ಅಲ್ಲಿ ಹೇಳಿಲ್ಲ. ಇಲ್ಲಿ ಅಂದರೆ ದ್ವಯದ ಉತ್ತರ ವಾಕ್ಯದಲ್ಲಿ "ಶ್ರೀಮತೇ ನಾರಾಯಣಾಯ" ಎಂದು ಶ್ರೀ ಸಹಿತನಾದ ನಾರಾಯಣನಿಗೆ ಕೈಂಕರ್ಯ ವನ್ನು ಮಾಡಬೇಕೆಂದು ವಿಶದವಾಗಿ ತಿಳಿಸಿದೆ. ಮತ್ತು "ನಮಃ" ಎಂದು (ಮಃನ) ಎಂದು ಕೈಂಕರ್ಯವನ್ನು ಮಾಡುವವನು ನಿರ್ಮಮ (ಮಮ ಕಾರರಹಿತ)ನಾಗಿ ಇರಬೇಕೆಂಬುದನ್ನು ಇಲ್ಲಿ ಶಾಬ್ದವಾಗಿ ತಿಳಿಸಿದೆ. ಅಂದರೆ ತಿರುಮಂತ್ರದಲ್ಲಿ "ನಾರಾಯಣಾಯ" ಎಂದು ಹೇಳಿರುವ ಪದಕ್ಕೆ ದ್ವಯ ಮಂತ್ರದಲ್ಲಿ "ಶ್ರೀಮತೇ ನಾರಾಯಣಾಯ ನಮಃ" ಎಂದು ಶ್ರೀಮತ್ ಮತ್ತು ನಮಃ ಎಂಬ ಪದಗಳಿಂದ ಶಾಬ್ದವಾಗಿ ಅರ್ಥವು ವಿವರಿ ಸಲ್ಪಟ್ಟಿದೆ.)

**169. ಇಳೈಯ ಪೆರುಮಾಳೈಪ್ಪೋಲೇ ಇರುವರುಮಾನ ಶೇರ್ತ್ತಿಯಿಲೇ ಅಡಿಮೈ ಶೆಯ್‌ಗೈಯುಮೈ.**

(ಸೀತಾದೇವಿಯೊಡನೆ ಕೂಡಿದ ಪರಮಾತ್ಮನಿಗೆ ಕೈಂಕರ್ಯವನ್ನು ಮಾಡಿದ) ಲಕ್ಷ್ಮಣನಂತೆ ಶ್ರೀ ಸಹಿತನಾದ ಪರಮಾತ್ಮನಿಗೆ ಕೈಂಕರ್ಯ ಮಾಡುವುದು ಈ ಆತ್ಮನಿಗೆ ಸ್ವರೂಪ ಪ್ರಾಪ್ತವಾದುದು. (ಇದಕ್ಕೆ ಮಿಥುನ ಕೈಂಕರ್ಯವೆಂದು ಹೆಸರು )

**170. ಅಡಿವೈತಾನ್ ಸಿದ್ಧಿಪ್ಪದುವುಮ್ ರಸಿಪ್ಪದುವುಮ್ ಅಚ್ಚೇರ್-ತ್ತಿಯಿಲೇ.**

ಚೇತನನು ಮಾಡುವ ಈ ಕೈಂಕರ್ಯವು ಸಿದ್ಧಿಸುವುದೂ, ರಸಭರಿತವಾಗುವುದೂ ಪರಮಾತ್ಮನು ಶ್ರೀ ಸಹಿತನಾಗಿರುವಾಗಲೇ.

## ನಾರಾಯಣಾಯ ಪದದ ಅರ್ಥ

(ಸೂತ್ರಗಳು 171 ರಿಂದ 175)

**171. "ನಾರಾಯಣಾಯ"**

**172. ಸರ್ವಶೇಷಿಯಾಯುಳ್ಳವನಕ್ಕು.**

'ನಾರಾಯಣಾಯ' ಎಂದರೆ ಸರ್ವಶೇಷಿಯಾದವನಿಗೆ ಎಂದು ಅರ್ಥ.

**173. ಇದಿಲೇ ತಿರುಮೇನಿಯೈಯುಮ್ ಗುಣಂಗಳೈಯುಮ್ ಶೊಲ್ಲುಮ್.**

ಈ ನಾರಾಯಣ ಪದದಲ್ಲಿ (ಕೈಂಕರ್ಯ ಅನುಭವಕ್ಕೆ ವಿಷಯನಾದ) ನಾರಾಯಣನ ದಿವ್ಯ ಮಂಗಳ ವಿಗ್ರಹವೂ, ಕಲ್ಯಾಣ ಗುಣಗಳೂ ತಿಳಿಸಲ್ಪಟ್ಟಿವೆ. (ಪೂರ್ವ ವಾಕ್ಯದಲ್ಲಿ ನಾರಾಯಣ ಪದದಲ್ಲಿ) ಉಪಾಯ ವರಣಕ್ಕೆ (ಸ್ವೀಕಾರಕ್ಕೆ) ಅನುಸಂಧೇಯಗಳಾಗಿ ತಿಳಿಸಿದ ವಾತ್ಸಲ್ಯಾದಿ ಗುಣಗಳೂ ಈ ಉತ್ತರವಾಕ್ಯದ ಪದದಲ್ಲಿಯೂ ಪ್ರಾಪ್ಯತಯಾ ಅನುಸಂಧೇಯವಾದವುಗಳಾಗಿವೆ.)

**174. ಶೇಷಿತ್ವತ್ತಿಲೇ ನೋಕ್ಕು.**

ಇಲ್ಲಿ ನಾರಾಯಣ ಪದಕ್ಕೆ ಶೇಷಿ (ಸ್ವಾಮಿ) ಎಂಬುದೇ ಮುಖ್ಯವಾದ ತಾತ್ಪರ್ಯಾರ್ಥ.

**175. ಪ್ರಾಪ್ಯ ವಿಷಯತ್ತಿಲ್ ಕೈಂಕರ್ಯಮಿರೇ ರಸಿಪ್ಪದು.**

ವಿಹಿತವಾದ ಪ್ರಾಪ್ತ ವಿಷಯದಲ್ಲಿ (ಅಂದರೆ ತಾನು ಗೌರವಿಸಿ ಪ್ರೀತಿಸುವ ಸ್ವಾಮಿಯಾದವನಿಗೆ) ಮಾಡುವ ಕೈಂಕರ್ಯವು ಚೇತನನಿಗೆ ರಸಭರಿತವಾಗಿ ಇರುತ್ತದೆಯಲ್ಲವೇ!

## 'ಆಯ' ಎಂಬ ಚತುರ್ಥಿ ಪ್ರತ್ಯಯದ ಅರ್ಥ

(ಸೂತ್ರಗಳು 176 ರಿಂದ 179)

**176. ಇಂದ ಚತುರ್ಥಿ ಕೈಂಕರ್ಯತ್ತೈ ಪ್ರಕಾಶಿಪ್ಪಿಕ್ಕಿರದು.**

(ನಾರಾಯಣಾಯ ಎಂಬ ಪದದಲ್ಲಿರುವ) ಈ 'ಆಯ' ಎಂಬ ಚತುರ್ಥಿ ಪ್ರತ್ಯಯವು ಕೈಂಕರ್ಯ ಪ್ರಾರ್ಥನೆಯನ್ನು ಹೇಳುತ್ತದೆ.

**177. ಕೈಂಕರ್ಯನ್ದಾನ್ ನಿತ್ಯಮ್.**

ಕೈಂಕರ್ಯವೆಂಬುದು ಆತ್ಮನಿಗೆ ನಿತ್ಯವಾದುದು. (ಶೇಷತ್ವವೇ ಅಂದರೆ ದಾಸತ್ವವೇ ಅವನ ಸ್ವರೂಪವಾಗಿರುವುದರಿಂದ ಸ್ವಾಮಿಗೆ ಕೈಂಕರ್ಯ ಮಾಡುವುದೇ ದಾಸನ ನಿತ್ಯ ಕರ್ತವ್ಯ.)

**178. ನಿತ್ಯಮಾಗ ಪ್ರಾರ್ಥಿತ್ತೇ ಪೆರವೇಣುಮ್.**

ನಿತ್ಯವಾಗಿ ಪ್ರಾರ್ಥನೆ ಮಾಡಿಯೇ ಕೈಂಕರ್ಯವನ್ನು ಪಡೆಯಬೇಕು. (ಕೈಂಕರ್ಯಕ್ಕೆ ವಿಷಯಭೂತನಾದ ಪರಮಾತ್ಮನು ಎಲ್ಲರಿಗಿಂತಲೂ ಮೇಲಾದವನಾಗಿ ಇರುವುದರಿಂದಲೂ, ಕೈಂಕರ್ಯವನ್ನು ಮಾಡುವ ಚೇತನನು ಅತ್ಯಂತ ಪರತಂತ್ರನಾಗಿರುವುದರಿಂದಲೂ ಚೇತನನು ಕೈಂಕರ್ಯವನ್ನು ನಿತ್ಯವೂ ಪರಮಾತ್ಮನನ್ನು ಪ್ರಾರ್ಥಿಸಿಯೇ ಮಾಡಬೇಕು ಎಂಬುದು ಅಭಿಪ್ರಾಯ. ಆದ್ದರಿಂದಲೇ ಗದ್ಯದಲ್ಲಿ ಶ್ರೀರಾಮಾನುಜರು 'ನಿತ್ಯಕಿಂಕರೋ ಭವಾನಿ' ಎಂದು ಪ್ರಾರ್ಥಿಸಿದ್ದಾರೆ.)

**179. ಶೇಷಿಕ್ಕು ಅತಿಶಯತ್ತೈ ವಿಳೈಕ್ಕೈ ಶೇಷಭೂತನುಕ್ಕು ಸ್ವರೂಪಲಾಭಮುಮ್ ಪ್ರಾಪ್ಯಮುಮ್.**

ಶೇಷಿಯಾದ ಪರಮಾತ್ಮನಿಗೆ (ಪ್ರೀತಿರೂಪವಾದ ಕೈಂಕರ್ಯಗಳನ್ನು ಮಾಡಿ) ಆನಂದವನ್ನುಂಟುಮಾಡುವುದೇ ಶೇಷಭೂತನಾದ ಚೇತನನಿಗೆ

ಸ್ವರೂಪಲಾಭವಾಗಿದೆ [ಅಂದರೆ ಅವನ ಶೇಷತ್ವ (ದಾಸತ್ವ)ವೆಂಬ ಸ್ವರೂಪದ ಧ್ಯೇಯವಾಗಿದೆ] ಮತ್ತು (ಅವನ ಮುಖೋಲ್ಲಾಸದ ಅನುಭವವೇ ಇವನಿಗೆ ಪರಮಪುರುಷಾರ್ಥವಾಗಿರುವುದರಿಂದ) ಪ್ರಾಪ್ಯವಾಗಿ ಪುರುಷಾರ್ಥವಾಗಿಯೂ ಇದೆ. ಈ ಕಾರಣಗಳಿಂದ ಕೈಂಕರ್ಯವು ನಿತ್ಯ ಪ್ರಾರ್ಥನೀಯವೆಂದು ಹೇಳಿದೆ.

## ನಮಃ ಎಂಬ ಪದದ ಅರ್ಥ
### (ಸೂತ್ರಗಳು 180 ರಿಂದ 187)

**180. 'ನಮಃ'**

ನಮಃ

**181. ಕೈಂಕರ್ಯತ್ತಿಲ್ ಕಳೈಯರುಕ್ಕಿರದು.**

ನಮಃ ಎಂದರೆ 'ಮಃನ' ಎಂಬುದು ಕೈಂಕರ್ಯದಲ್ಲಿರುವ ವಿರೋಧಿ ನಿರಸನವನ್ನು ತಿಳಿಸುತ್ತದೆ. "ಮಃನ" ಎಂದರೆ ಕೈಂಕರ್ಯವನ್ನು ನನ್ನ ಸಂತೋಷಕ್ಕಾಗಿ ಅಲ್ಲ, "ನಾರಾಯಣಾಯ" ಎಂದರೆ ನಾರಾಯಣನ ಸಂತೋಷಕ್ಕಾಗಿಯೇ ಮಾಡುತ್ತೇನೆ ಎಂದು ಅರ್ಥ. ಕಳೆ ಎಂದರೆ ಸಸ್ಯ ವೃದ್ಧಿಗೆ ವಿರೋಧವಾದ ಕುರುಚಲು ಗಿಡಗಳು. ಇವುಗಳನ್ನು ಕೀಳುವಂತೆ ಇಲ್ಲಿ ಕೈಂಕರ್ಯಕ್ಕೆ ವಿರೋಧಿಗಳಾದ ಅಹಂಕಾರ ಮಮಕಾರಗಳ ನಿರಸನವನ್ನು ಈ 'ನಮಃ' ಎಂಬ ಪದವು ತಿಳಿಸುತ್ತದೆ.)

**182. ಕಳೈಯಾವದು ತನಕ್ಕೆನ್ನ ಪ್ಪಣ್ಣುಮದು.**

ಕೈಂಕರ್ಯ ವಿರೋಧಿಯು ಯಾವುವೆಂದರೆ ತನ್ನ ಆನಂದಕ್ಕಾಗಿ ಮಾಡುವುದು. (ಕೈಂಕರ್ಯವನ್ನು ಪರಮಾತ್ಮನ ಮುಖೋಲ್ಲಾಸಕ್ಕಾಗಿಯೇ ಮಾಡಬೇಕೇ ಹೊರತು ತನ್ನ ಸ್ವಂತ ಅನುಭವಕ್ಕಾಗಿ ಅಲ್ಲ ಎಂಬುದೇ ಅಭಿಪ್ರಾಯ.)

**183. ಇದಿಲೇ ಅವಿದ್ಯಾದಿಗಳುಂ ಕಳಿಯುಂ ಣ್ಣುವರ್.**

ನಮಃ ಎಂಬ ಪದವು ಕೈಂಕರ್ಯ ಪ್ರಾಪ್ತಿಗೆ ಇರುವ ಅವಿದ್ಯಾದಿ ಇತರ ವಿರೋಧಿಗಳ ನಿರಸನವನ್ನೂ ತಿಳಿಸುತ್ತದೆ. (ಆದಾಗ್ಯೂ ಪ್ರಧಾನವಾದ ಅರ್ಥವು ಕೈಂಕರ್ಯದಲ್ಲಿ ಸ್ವಪ್ರಯೋಜನ ನಿವೃತ್ತಿಯೇ ಆಗಿದೆ )

**184. "ಉನಕ್ಕೇ ನಾಮ್ ಆಳ್ ಶೆಯ್ ವೋಮ್" ಎನ್ನುಂಬಡಿಯೇ ಆಗವೇಣುಮ್.**

"ಉನಕ್ಕೇ ನಾಮ್ ಆಳ್ ಶೆಯ್ ವೋಮ್" ಎಂದು ತಿರುಪ್ಪಾವೈಯಲ್ಲಿ ಹೇಳಿರುವಂತೆ—ಕೈಂಕರ್ಯವನ್ನು ನಿನ್ನ ಸಂತೋಷಕ್ಕಾಗಿಯೇ ಮಾಡುತ್ತೇನೆ ಎನ್ನುವ ಅಧ್ಯವಸಾಯ ಉಂಟಾಗಬೇಕು. ನನ್ನ ಸಂತೋಷಕ್ಕಾಗಿಯಾಗಲೀ. ನಿನ್ನ ಮತ್ತು ನನ್ನ ಸಂತೋಷಕ್ಕಾಗಿಯಾಗಲೀ, ಕೈಂಕರ್ಯಗಳನ್ನು ಮಾಡದೆ ಕೇವಲ ನಿನ್ನ ಅಂದರೆ ಪರಮಾತ್ಮನ ಸಂತೋಷಕ್ಕಾಗಿಯೇ ನಾವು ಕೈಂಕರ್ಯವನ್ನು ಮಾಡಬೇಕು. (ಆದ್ದರಿಂದಲೇ ತಿರುವಾಯ್ಮೊಳಿಯಲ್ಲಿ "ತನಕ್ಕೇಯಾಹ ಎನ್ನೈ ಕೊಳ್ಳುಮಾದೆ" ಎಂದು ನಮ್ಮಾಳ್ವಾರರೂ, "ಉನಕ್ಕೇ ನಾಮಾಳ್ ಶೈವೋಮ್" ಎಂದು ತಿರುಪ್ಪಾವೈಯಲ್ಲಿ ಗೋದಾದೇವಿಯೂ ಪ್ರಾರ್ಥಿಸಿದ್ದಾರೆ.)

**185. ಸೌಂದರ್ಯಮಂತರಾಯುಮ್; ಕೀಳ್ ಚೊನ್ನ ಕೈಂಕರ್ಯ-ಮುಮಪ್ಪಡಿಯೇ.**

ಅವನ ವಿಗ್ರಹದ ಸೌಂದರ್ಯವು ದೃಷ್ಟಿ ಚಿತ್ತಾಪಹಾರಕವಾಗಿ ಅಂದರೆ ನಮ್ಮ ಕಣ್ಣು, ಮನಸ್ಸು ಇವುಗಳನ್ನು ಅಪಹರಿಸುವುದರಿಂದ ಅವು ಕೈಂಕರ್ಯಕ್ಕೆ ವಿಘ್ನವಾಗಿದೆ ಎಂದು ಹೇಳುತ್ತಾರೆ. ನಮಸ್ಸಿಗೆ ಹಿಂದೆ 'ಆಯ' ಎಂಬ ಚತುರ್ಥಿಯಲ್ಲಿ ಹೇಳಿದ ಕೈಂಕರ್ಯವೂ ಅಭಿಮತ ವಿಷಯಕ್ಕೆ ಮಾಡುವ ಸೇವಾಕಾರ್ಯದಂತೆ ಸ್ವರಸಾನುಭವಕ್ಕೆ ಕಾರಣವಾಗಿರುವುದರಿಂದ ಅವನ ಮುಖೋಲ್ಲಾಸವನ್ನೇ ಪ್ರಯೋಜನವಾಗಿ ಹೊಂದಿರುವ ಅವನ ಕೈಂಕರ್ಯಕ್ಕೆ ನಮ್ಮ ಈ ಆನಂದ ಅನುಭವವು ವಿಘ್ನವಾಗಿದೆ. (ನಮಃ ಎಂಬ ಪದದ ಅರ್ಥದೊಂದಿಗೆ ಸೇರದ ಅಂದರೆ ಸ್ವಪ್ರಯೋಜನ ನಿವೃತ್ತಿಯಿಂದ ಕೂಡಿಲ್ಲದ ಕೈಂಕರ್ಯವೂ ಅವಧ್ಯಕರವಾದುದು.)

**186. ಕೈಂಕರ್ಯ ಪ್ರಾರ್ಥನೈ ಪೋಲೇ ಇಷ್ಟದತ್ತಿಲ್ ಪ್ರಾರ್ಥನೈ-ಯುಮೊನ್ರುವರ್ ಉಂಡು.**

ಕೈಂಕರ್ಯ ಪ್ರಾರ್ಥನೆಯುಂತೆ, ಈ ನಮಃ ಪದದಲ್ಲಿ ಹೇಳಿರುವ ಕೈಂಕರ್ಯ ವಿರೋಧಿ ನಿವೃತ್ತಿ ಪ್ರಾರ್ಥನೆಯೂ ಎಂದೆಂದಿಗೂ ಉಂಟು ಅಂದರೆ ಸದಾ ಕಾಲದಲ್ಲಿಯೂ ನಡೆಯುತಕ್ಕುದಾಗಿ ನಿತ್ಯವಾದುದಾಗಿದೆ. (ಭಗವಂತನಲ್ಲಿ ಕೈಂಕರ್ಯ ಪ್ರಾರ್ಥನೆಯನ್ನೂ, ಕೈಂಕರ್ಯ ವಿರೋಧಿ ನಿವೃತ್ತಿ ಪ್ರಾರ್ಥನೆಯನ್ನೂ ಸರ್ವದಾ ಮಾಡಬೇಕು.)

187. **"ಮರುಂದೇ ನಂಗಳ್ ಭೋಗಮುಗಿಳ್ ಚ್ಚಿಕ್ಕು" ಎನ್ನಾನಿನ್ರದಿರೇ.**

ನಿತ್ಯ ಸೂರಿಗಳು ಈ ಕೈಂಕರ್ಯ ವಿರೋಧಿ ನಿವೃತ್ತಿ ಪ್ರಾರ್ಥನೆಯನ್ನು ಎಡಬಿಡದೆ ಸರ್ವದಾ ಹೇಗೆ ಮಾಡುತ್ತಿದ್ದಾರೆ. "ಮರುಂದೇ ನಂಗಳ್ ಭೋಗಮುಹಳ್ ಚ್ಚಿಕ್ಕು" ಅಂದರೆ 'ನಿನ್ನ ಅನುಭವದಿಂದ ನಮಗೆ ಬರುವ ಆನಂದವನ್ನು ನಾವು ಅನುಭವಿಸಬೇಕೆಂಬ ಬುದ್ಧಿಯು ಹುಟ್ಟಿ ನಮ್ಮ ಸ್ವರೂಪವು ಅಳಿದುಹೋಗುವುದರಿಂದ ಆ ಸ್ವಭೋಕ್ತೃತ್ವ ಬುದ್ಧಿಯು ನಮಗೆ ಬರದಂತೆ ಮಾಡುವ ಔಷಧಿಯಾದವನೇ ಎಂದು ನಿತ್ಯ ಸೂರಿಗಳು ಪ್ರಾರ್ಥಿಸುತ್ತಾರೆ.' ಎಂದು ತಿಳಿವಾಯ್ಮೊಳಿ (9–3–4) ಪಾಶುರದಲ್ಲಿ ತಿಳಿಸಿದೆ. (ಆದ್ದರಿಂದ ಈ ನಮಃ ಎಂಬ ಪದದಲ್ಲಿ ಹೇಳಿರುವ ಈ ಕೈಂಕರ್ಯ ವಿರೋಧಿ ನಿವೃತ್ತಿ ಪ್ರಾರ್ಥನೆಯು ಈಗ ಇರುವ ಕಾಲ, ಪರಮಪದಕ್ಕೆ ಹೋದ ಮೇಲಿನ ಕಾಲ ಎರಡರಲ್ಲೂ ಸರ್ವದಾ ನಡೆಯು ತಕ್ಕುದಾಗಿ ನಿತ್ಯವಾಗಿದೆ.)

## ದ್ವಯ ಪ್ರಕರಣಮ್ ಮುತ್ತಿತ್ತು.

**ಸಾರಾಂಶ:**—ಈ ದ್ವಯ ಪ್ರಕರಣದಲ್ಲಿ ಎರಡು ವಾಕ್ಯಗಳೂ ಮತ್ತು ಆರು ಪದಗಳೂ ಇವೆ,

1. **ಶ್ರೀಮನ್ನಾರಾಯಣ ಚರಣೌ ಶರಣಂ ಪ್ರಪದ್ಯೇ**—ಎಂಬುದು ಮೊದಲನೆಯ ವಾಕ್ಯ.

ಇದರಲ್ಲಿ ಶ್ರೀಮನ್ನಾರಾಯಣಚರಣೌ, ಶರಣಂ, ಪ್ರಪದ್ಯೇ—ಎಂಬ ಮೂರು ಪದಗಳಿವೆ.

**ಶ್ರೀಮನ್ನಾರಾಯಣಚರಣೌ**—ಶ್ರೀ ಸಹಿತನಾಗಿರುವ ಮತ್ತು ವಾತ್ಸಲ್ಯಾದಿ ಗುಣಗಳಿಂದ ಕೂಡಿರುವ ಪರಮಾತ್ಮನ ಪಾದಗಳನ್ನು

(ಇದರಲ್ಲಿ ಶ್ರೀ ಎಂದು ಶ್ರೀದೇವಿಯ ಪುರುಷಕಾರವೂ ಮತ್ತು ಮತ್ ಎಂದು ಅವಳು ಪರಮಾತ್ಮನೊಂದಿಗೆ ಸರ್ವದಾ ಸೇರಿರುವ ಅವಳ ನಿತ್ಯ ಯೋಗವೂ ನಾರಾಯಣ ಎಂದು ಪರಮಾತ್ಮನ ವಾತ್ಸಲ್ಯ, ಸ್ವಾಮಿತ್ವ, ಸೌಶೀಲ್ಯ, ಸೌಲಭ್ಯ, ಜ್ಞಾನ ಶಕ್ತ್ಯಾದಿಗುಣಗಳೂ ತಿಳಿಸಲ್ಪಟ್ಟಿವೆ.)

**ಶರಣಂ**—ಉಪಾಯವಾಗಿ

**ಪ್ರಪದ್ಯೇ**—ಸ್ವೀಕರಿಸುತ್ತೇನೆ

ಎಂಬ ಶರಣ ವರಣವು (ಶರಣಾಗತಿಯು) ಮೊದಲನೆಯ ವಾಕ್ಯದಲ್ಲಿ ತಿಳಿಸಿದೆ.

2. **'ಶ್ರೀಮತೇ ನಾರಾಯಣಾಯ ನಮಃ'**—ಎಂಬುದು ಎರಡನೆಯ ವಾಕ್ಯ.

ಇದರಲ್ಲಿ ಶ್ರೀಮತೇ, ನಾರಾಯಣಾಯ, ನಮಃ ಎಂದು ಮೂರು ಪದಗಳಿವೆ.

**ಶ್ರೀಮತೇ**—ಶ್ರೀಸಹಿತನಾದ.

**ನಾರಾಯಣಾಯ**—ಸರ್ವ ಶೇಷಿಯಾದ ನಾರಾಯಣನಿಗೇ ಸರ್ವದಾ ಸಕಲ ವಿಧ ಕೈಂಕರ್ಯಗಳನ್ನೂ ಮಾಡುವವನಾಗಬೇಕು.

**ನಮಃ**—ಮತ್ತು ಕೈಂಕರ್ಯದಲ್ಲಿ ಸ್ವಭೋಕ್ತೃತ್ವ ಬುದ್ಧಿಯಿರಕೂಡದು ಎಂದು ಶ್ರೀಮನ್ನಾರಾಯಣನನ್ನೇ ನಮಸ್ಕರಿಸಿ ಪ್ರಾರ್ಥಿಸುತ್ತೇನೆ ಎಂಬ ಭಗವತ್ಕೈಂಕರ್ಯವೆಂಬ ಪರಮಪುರುಷಾರ್ಥ ಪ್ರಾರ್ಥನೆಯು ಎರಡನೆಯ ವಾಕ್ಯದಲ್ಲಿ ತಿಳಿಸಿದೆ.

ಶ್ರೀಸಹಿತನಾದ ಪರಮಾತ್ಮನ ಪಾದಗಳಲ್ಲಿ ಶರಣಾಗತಿ ಮಾಡುತ್ತೇನೆ ಮತ್ತು ಶ್ರೀಸಹಿತನಾದ ಪರಮಾತ್ಮನಿಗೆ ಸರ್ವದಾ ಸರ್ವವಿಧ ಕೈಂಕರ್ಯಗಳನ್ನೂ ಸ್ವಾರ್ಥರಹಿತನಾಗಿ ಮಾಡುವವನಾಗಬೇಕು ಎಂದು ಅವನನ್ನೇ ನಮಸ್ಕರಿಸಿ ಪ್ರಾರ್ಥಿಸುತ್ತೇನೆ ಎಂಬುದೇ ಈ ದ್ವಯಮಂತ್ರದ ಸಾರಾರ್ಥ.

**ಪಿಳ್ಳೈ ಲೋಕಾಚಾರ್ಯರ್ ತಿರುವಡಿಗಳೇ ಶರಣಮ್**

**ಜೀಯರ್ ತಿರುವಡಿಗಳೇ ಶರಣಮ್.**

ದ್ವಯ ಪ್ರಕರಣವು ಮುಗಿಯಿತು.

---

# ಚರಮಶ್ಲೋಕ ಪ್ರಕರಣವು

ಸರ್ವಧರ್ಮಾನ್ ಪರಿತ್ಯಜ್ಯ ಮಾಂ ಏಕಂ ಶರಣಂ ವ್ರಜ|
ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ||
ಎಂಬ ಚರಮಶ್ಲೋಕವು
(ಇದು ಭಗವದ್ಗೀತೆಯ 18ನೇ ಅಧ್ಯಾಯದ 66ನೆಯ ಶ್ಲೋಕ.)

188. **ಕೀಳೇ ಶಿಲ ಉಪಾಯವಿಶೇಷಂಗಳೈ ಉಪದೇಶಿಕ್ಕ ಅವೈ ದುಶ್ಶಕಂಗಳೆನ್ರುಮ್, ಸ್ವರೂಪವಿರೋಧಿಗಳ್ ಎನ್ರುಮ್ ನಿನೈತ್ತು ಶೋಕಾವಿಷ್ಟನಾನ ಅರ್ಜುನನೈ ಕ್ಕುರಿತ್ತು ಅವನುಡೈಯ ಶೋಕನಿವೃತ್ತ್ಯರ್ಥಮಾಗ "ಇನಿ ಇದುಕ್ಕವ್ವರುಗಿಲ್ಲೈ" ಎನ್ನಲಾಂಬಡಿಯಾನ ಚರಮೋಪಾಯತ್ತೈ ಅರುಳಿಚ್ಚೆಯ್‌ಗೈಯಾಲೆ ಚರಮಶ್ಲೋಕಮೆನ್ರು ಇದುಕ್ಕು ಪೇರಾಯಿರುಕ್ಕಿರದು.**

ಗೀತೆಯಲ್ಲಿ ಈ ಶ್ಲೋಕಕ್ಕೆ ಹಿಂದಿನ ಶ್ಲೋಕಗಳಲ್ಲಿ ಕರ್ಮ, ಜ್ಞಾನ, ಭಕ್ತಿ ಮುಂತಾದ ಕೆಲವು ಉಪಾಯಗಳನ್ನು ಶ್ರೀಕೃಷ್ಣನು ಉಪದೇಶಿಸಿದ್ದಾನೆ; ಅವು ಅನುಷ್ಠಿಸಲು ಕಷ್ಟಸಾಧ್ಯವಾದವುಗಳು ಎಂದೂ, ತನ್ನ ಪಾರತಂತ್ರ್ಯ ಸ್ವರೂಪಕ್ಕೆ ಅವು ವಿರೋಧವಾದವುಗಳು ಎಂದೂ ನೆನೆಸಿ ಶೋಕಗೊಂಡ ಅರ್ಜುನನನ್ನು ಕುರಿತು, ಅವನ ಶೋಕ ನಿವೃತ್ತಿಗಾಗಿ ಇದಕ್ಕೆ ಸಮನಾದುದು ಬೇರೆ ಯಾವುದೂ ಇಲ್ಲ ಎನ್ನುವಂತೆ ಇರುವ ಈ ಚರಮೋಪಾಯವನ್ನು ಕೊನೆಯಲ್ಲಿ ಈ ಶ್ಲೋಕದಲ್ಲಿ ಉಪದೇಶಿಸಿರುವುದರಿಂದ ಇದಕ್ಕೆ ಚರಮಶ್ಲೋಕವೆಂದು ಹೆಸರಾಯಿತು.

189. **ಇದಿಲ್ ಪೂರ್ವಾರ್ಧತ್ತಾಲೆ ಅಧಿಕಾರಿಕೃತ್ಯತ್ತೈ ಅರುಳಿಚ್ಚೆಯ್‌ಗಿರಾನ್; ಉತ್ತರಾರ್ಧತ್ತಾಲೆ ಉಪಾಯಕೃತ್ಯತ್ತೈ ಅರುಳಿಚ್ಚೆಯ್‌ಗಿರಾನ್.**

ಈ ಶ್ಲೋಕದ 'ಸರ್ವಧರ್ಮಾನ್ ಪರಿತ್ಯಜ್ಯ ಮಾಂ ಏಕಂ ಶರಣಂ ವ್ರಜ'! ಎಂಬ ಪೂರ್ವಾರ್ಧದಲ್ಲಿ ಅಧಿಕಾರಿಯಾದ ಚೇತನನು ಮಾಡಬೇಕಾದುದನ್ನು (ಅಂದರೆ ಸರ್ವಧರ್ಮಗಳನ್ನೂ ಪರಿತ್ಯಜಿಸಿ ಪರಮಾತ್ಮನಲ್ಲೇ

ಶರಣಾಗಬೇಕೆಂಬುದನ್ನು) ತಿಳಿಸುತ್ತಾನೆ—"ಅಹಂ ತ್ವಾ ಸರ್ವ ಪಾಪೇ-ಭ್ಯೋ ಮೋಕ್ಷಯಿಷ್ಯಾಮಿ"— ಎಂಬ ಉತ್ತರಾರ್ಧದಲ್ಲಿ ಉಪಾಯಭೂತನಾದ ತಾನು ಮಾಡಬೇಕಾದ ಉಪಾಯಕೃತ್ಯವನ್ನು ಅಂದರೆ (ಶರಣಾಗತನಾದ ಚೇತನನ ಸಮಸ್ತ ಪಾಪಗಳನ್ನೂ ಹೋಗಲಾಡಿಸಿ ತಾನೇ ಅವನನ್ನು ರಕ್ಷಿಸುವುದನ್ನು) ತಿಳಿಸುತ್ತಾನೆ.

## ಸರ್ವಧರ್ಮಾನ್ ಪರಿತ್ಯಜ್ಯ ಮಾಂ ಏಕಂ ಶರಣಂ ವ್ರಜ ಎಂಬ ಮೊದಲನೆಯ ವಾಕ್ಯದ ಅರ್ಥ.

(ಸೂತ್ರಗಳು 190 ರಿಂದ 193)

**190. ಅಧಿಕಾರಿಕ್ಕು ಕೃತ್ಯಮಾವದು ಉಪಾಯ ಪರಿಗ್ರಹಮ್.**

ಚೇತನನು ಮಾಡಬೇಕಾದುದೇನೆಂದರೆ ಈ ಉಪಾಯವನ್ನು ಸ್ವೀಕರಿಸಿ, ಪರಮಾತ್ಮನಲ್ಲಿ ಶರಣಾಗತಿ ಮಾಡುವುದು.

**191. ಅತ್ತೈ ಸಾಂಗಮಾಗ ವಿಧಿಕ್ಕಿರಾನ್.**

ಈ ಶರಣ ವರಣವನ್ನು ಅಂಗದೊಂದಿಗೆ (ಸರ್ವ ಧರ್ಮಗಳನ್ನೂ ತ್ಯಜಿಸಬೇಕೆಂಬ ಅಂಗದೊಂದಿಗೆ) ವಿಧಿಸಿದ್ದಾನೆ.

**192. ರಾಗ ಪ್ರಾಪ್ತಮಾನ ಉಪಾಯನ್ದಾನೇ ವೈಧಮಾನಾಲ್ ಕಡುಗಪ್ಪರಿಗ್ರಹಿಕ್ಕೈಕ್ಕು ಉಡಲಾಯಿರುಕ್ಕುಮಿರೇ.**

ಬಹಳ ಸುಖರೂಪವಾಗಿರುವ ಉಪಾಯವನ್ನು ಮಾಡಬೇಕೆಂದು ವಿಧಿಸಿದರೆ ಕೂಡಲೇ ಅನುಷ್ಠಿಸಲು ಆತುರವಾಗುತ್ತದೆಯಲ್ಲವೇ! (ಹಾಲನ್ನು ಪಿತ್ತ ರೋಗಕ್ಕೆ ಔಷಧಿಯಾಗಿ ವಿಧಿಸಿದರೆ ಶೀಘ್ರವಾಗಿ ಅದನ್ನು ಸೇವಿಸುವಂತೆ.)

**193. ಇದಿಲ್ ಪೂರ್ವಾರ್ಧಮ್ ಅರುಪದಮ್.**

ಈ ಮಂತ್ರದ ಮೊದಲನೆಯ ವಾಕ್ಯದಲ್ಲಿ ಆರು ಪದಗಳಿವೆ.

1) ಸರ್ವಧರ್ಮಾನ್ 2) ಪರಿತ್ಯಜ್ಯ 3) ಮಾಂ

4) ಏಕಂ 5) ಶರಣಂ 6) ವ್ರಜ.

## 'ಸರ್ವಧರ್ಮಾನ್'
## ಎಂಬ ಮೊದಲನೆಯ ಪದದ ಅರ್ಥ
## (ಸೂತ್ರಗಳು 194 ರಿಂದ 202)

**194. "ಸರ್ವಧರ್ಮಾನ್"**

ಎಲ್ಲಾ ಧರ್ಮಗಳನ್ನೂ

**195. ಎಲ್ಲಾ ಧರ್ಮಂಗಳೈಯುಂವೆನ್.**

ಎಲ್ಲಾ ಧರ್ಮಗಳನ್ನೂ ಎಂದು ಅರ್ಥ.

**196. ಧರ್ಮಮಾವದು ಫಲಸಾಧನಮಾಯಿರುಕ್ಕುಮದು.**

ಧರ್ಮವೆಂಬುದಕ್ಕೆ ಫಲಕ್ಕೆ ಸಾಧನವಾಗಿರುವುದು ಎಂದು ಅರ್ಥ.

**197. ಇಂಗುಚ್ಚೊಲ್ಲುಗಿರ ಧರ್ಮಶಬ್ದಮ್ ದೃಷ್ಟಫಲಸಾಧನಂಗಳೈ ಚ್ಚೊಲ್ಲಾದೇ ಯುನ್ರಿಕ್ಕೇ ಮೋಕ್ಷಫಲಸಾಧನಂಗಳೈ ಚ್ಚೊಲ್ಲು-ಗಿರದು.**

ಇಲ್ಲಿ ಹೇಳಿರುವ ಧರ್ಮಶಬ್ದವು ಐಹಿಕ, ಆಮುಷ್ಮಿಕಾದಿ ದೃಷ್ಟಫಲ ಸಾಧನಗಳನ್ನು ಹೇಳದೆ ಭಗವತ್‌ಪ್ರಾಪ್ತಿ ರೂಪವಾದ ಮೋಕ್ಷ ಫಲ ಸಾಧನಗಳನ್ನು ತಿಳಿಸುತ್ತದೆ.

**198. ಅನ್ವೈತಾನ್ ಶ್ರುತಿಸ್ಮೃತಿ ವಿಹಿತಂಗಳಾಯ್ ಪಲವಾಯಿರು-ಕ್ಕೈಯಾಲೆ ಬಹುವಚನ ಪ್ರಯೋಗಮ್ ಪಣ್ಣುಗಿರದು.**

ಆ ಮೋಕ್ಷಫಲಸಾಧನಗಳು ಶ್ರುತಿಸ್ಮೃತಿಗಳಲ್ಲಿ ವಿಧಿಸಲ್ಪಟ್ಟವುಗಳಾಗಿ ಅನೇಕವಾಗಿರುವುದರಿಂದ ಇಲ್ಲಿ 'ಧರ್ಮಾನ್' ಎಂದು ಬಹುವಚನ ಪ್ರಯೋಗ ಮಾಡಿದೆ.

**199. ಅವೈಯಾವನ—ಕರ್ಮ, ಜ್ಞಾನ, ಭಕ್ತಿಯೋಗಂಗಳುಮ್ ಅವತಾರ ರಹಸ್ಯಜ್ಞಾನಮ್ ಪುರುಷೋತ್ತಮವಿದ್ಯೈ ದೇಶ-ವಾಸಮ್ ತಿರುನಾಮಸಂಕೀರ್ತನಮ್ ತಿರುವಿಳಕ್ಕೆರಿಕ್ಕೈ ತಿರುಮಾಲೈಯೆಡುಕ್ಕೈ ತೊಡಕ್ಕಮಾನ ಉಪಾಯಬುದ್ಧ್ಯಾ ಶೆಯ್ಯುಮವೈ ಅವೈಯುಮ್.**

ಅವು ಯಾವುವೆಂದರೆ ಕರ್ಮ, ಜ್ಞಾನ, ಭಕ್ತಿ ಯೋಗಗಳೂ, ಅವತಾರ ರಹಸ್ಯ ಜ್ಞಾನವೂ, ಪುರುಷೋತ್ತಮ ವಿದ್ಯೆ, ಪುಣ್ಯಕ್ಷೇತ್ರವಾಸ, ಭಗವ-ನ್ನಾಮ ಸಂಕೀರ್ತನೆ, ದೇವಸ್ಥಾನಗಳಲ್ಲಿ ದೀಪ ಹಚ್ಚುವುದು, (ಭಗವಂತನ ವಿಗ್ರಹಗಳಿಗೆ) ಹಾರ ಸಮರ್ಪಿಸುವುದು ಮುಂತಾದ ಉಪಾಯ ಬುದ್ಧಿಯಿಂದ (ಅಂದರೆ ಅವು ಭಗವತ್ ಪ್ರಾಪ್ತಿಗೆ ಸಾಧನಗಳೆಂಬ ಬುದ್ಧಿಯಿಂದ ಕೂಡಿ) ಮಾಡುವವುಗಳು.

**200. ಸರ್ವಶಬ್ದತ್ತಾಲೇ ಅವ್ವವಸಾಧನವಿಶೇಷಂಗಳೈ ಅನುಷ್ಠಿಕ್ಕುಮಿಡತ್ತಿಲ್ ಅವತ್ತುಕ್ಕು ಯೋಗ್ಯತಾಪಾದಕಂಗಳಾನ ನಿತ್ಯ-ಕರ್ಮಂಗಳೈ ಚೊಲ್ಲುಗಿರದು.**

'ಸರ್ವ' ಎಂಬ ಶಬ್ದದಿಂದ ಆಯಾ ಸಾಧನ ವಿಶೇಷಗಳನ್ನು ಅನುಷ್ಠಿಸುವಾಗ ಅವುಗಳಿಗೆ ಯೋಗ್ಯತೆಯನ್ನು ಉಂಟುಮಾಡುವ ಇತರ (ಸಂಧ್ಯಾ-ವಂದನಾದಿ) ನಿತ್ಯಕರ್ಮಗಳನ್ನು ಹೇಳಿದೆ.

**201. ಆಗ, ಶ್ರುತಿಸ್ಮೃತಿಚೋದಿತಂಗಳಾಯ್, ನಿತ್ಯನೈಮಿತ್ತಿಕಾದಿ ರೂಪಂಗಳಾನ ಕರ್ಮಯೋಗಾದ್ಯುಪಾಯಂಗಳೈ ಎನ್ರಪಡಿ.**

ಆದುದರಿಂದ 'ಸರ್ವಧರ್ಮಾನ್' ಎಂಬುದಕ್ಕೆ ಶ್ರುತಿ ಸ್ಮೃತಿಗಳಲ್ಲಿ ವಿಧಿಸಲ್ಪಟ್ಟಿರುವ ನಿತ್ಯನೈಮಿತ್ತಿಕಾದಿರೂಪಗಳಾದ ಕರ್ಮಯೋಗ ಮುಂತಾದ ಉಪಾಯಗಳು ಎಂದು ಅರ್ಥ ಹೇಳಿದೆ.

**202. ಇವತ್ತೈ ಧರ್ಮವೆನ್ನಿರದು ಭ್ರಮಿತ್ತ ಅರ್ಜುನನ್ ಕರುತ್ತಾಲೆ.**

(ಸ್ವಧರ್ಮವಾದ ಯುದ್ಧವನ್ನು ಅಧರ್ಮವೆಂದೂ, ಈ ಉಪಾಯಗಳನ್ನು ಧರ್ಮವೆಂದೂ) ಭ್ರಮೆ ಹೊಂದಿದ ಅರ್ಜುನನ ಅಭಿಪ್ರಾಯದಿಂದ (ಚೇತನನ ಸ್ವರೂಪಕ್ಕೆ ವಿರೋಧಿಗಳಾದ) ಇವುಗಳನ್ನು ಧರ್ಮವೆಂದು ಹೇಳಿದೆ.

## ಪರಿತ್ಯಜ್ಯ

### ಎಂಬ ಎರಡನೆಯ ಪದದ ಅರ್ಥ

### (ಸೂತ್ರಗಳು 203 ರಿಂದ 214)

**203. "ಪರಿತ್ಯಜ್ಯ"**

ಅಂದರೆ ಪರಿತ್ಯಜಿಸಿ

**204. ತ್ಯಾಗಮಾವದು — ಉಕ್ತೋಪಾಯಂಗಳೈ ಅನುಸಂಧಿತ್ತು "ಶುಕ್ತಿಕೈಯಿಲೇ ರಜತಬುದ್ಧಿ ಪಣ್ಣುವಾರೈಪ್ಪೋಲೇಯುಮ್ ವಿಪರೀತದಿಶಾಗಮನಮ್ ಪಣ್ಣುವಾರೈಪ್ಪೋಲೇಯುಮ್ ಅನುಪಾಯಂಗಳಿಲೇ ಉಪಾಯಬುದ್ಧಿಪಣ್ಣಿನೋಮ್" ಎನ್ನಿರ ಬುದ್ಧಿವಿಶೇಷತ್ತೋಡೇ ತ್ಯಜಿಕ್ಕೈ.**

ತ್ಯಾಗವೆಂದರೆ ಮೇಲೆ ಹೇಳಿದ ಉಪಾಯಗಳನ್ನು ಅನುಷ್ಠಿಸಿ ಮುತ್ತು ಚಿಪ್ಪನ್ನು ಬೆಳ್ಳಿ ಎಂದು ತಿಳಿಯುವವರಂತೆಯೂ, ತಾವು ಹೋಗಬೇಕಾದ ದಿಕ್ಕನ್ನು ಬಿಟ್ಟು ಬೇರೆ ದಿಕ್ಕನ್ನು ಅದೆಂದು ತಪ್ಪಾಗಿ ತಿಳಿದು ಆ ದಿಕ್ಕಿನಲ್ಲಿ ಹೋಗುವವರಂತೆಯೂ (ಭಗವತ್ಪ್ರಾಪ್ತಿಗೆ) ಉಪಾಯವಲ್ಲದವುಗಳನ್ನು ಉಪಾಯವೆಂದು ಭಾವಿಸಿ ಆಚರಿಸಿದೆವಲ್ಲಾ ಎಂಬ ಬುದ್ಧಿವಿಶೇಷದೊಂದಿಗೆ ಅವುಗಳನ್ನು ಬಿಡುವುದು.

**205. "ಪರಿ" ಎನ್ಗಿರ ಉಪಸರ್ಗತ್ತಾಲೇ ಪಾತಕಾದಿಗಳೈ ವಿಡುಮಾಪೋಲೆ ರುಚಿವಾಸನೈಗಳೋಡುಮ್ ಲಜ್ಜೈಯೋಡುಮ್ ಕೂಡ ಮರುವಲಿಡಾದಪಡಿ ವಿಡವೇಣುಮ್ ಎನ್ಗಿರದು.**

ಪರಿ—ಎಂಬ ಉಪಸರ್ಗದಿಂದ ಪಾತಕಾದಿಗಳನ್ನು ಬಿಡುವಂತೆ ರುಚಿ ವಾಸನೆಗಳೊಂದಿಗೂ, ಲಜ್ಜೆಯೊಂದಿಗೂ, ಅವುಗಳಲ್ಲಿ ಮತ್ತೆ ತಮಗೆ ಅನ್ವಯ ಬರದಂತೆ ಬಿಡಬೇಕು ಎಂಬುದು ತಿಳಿಸಲ್ಪಟ್ಟಿದೆ.

**206. ಲ್ಯಪ್ಪಾಲೇ "ಸ್ನಾತ್ವಾ ಭುಂಜೀತ" ಎನ್ನುಮಾಪೋಲೇ ಉಪಾಯಾಂತರಂಗಳೈ ವಿಟ್ಟೇ ಪತ್ತವೇಣುಮೆನ್ಗಿರದು.**

ತ್ಯಜ್ಯ—ಎಂಬ ಲ್ಯಪ್ಪಿನಿಂದ "ಸ್ನಾತ್ವಾ ಭುಂಜೀತ" ಅಂದರೆ "ಸ್ನಾನ ಮಾಡಿಯೇ ಊಟ ಮಾಡಬೇಕು" ಎಂದು ವಿಧಿಸಿರುವಂತೆ ತ್ಯಾಜ್ಯವಾದ ಉಪಾಯಾಂತರಗಳನ್ನೆಲ್ಲಾ ತ್ಯಜಿಸಿಯೇ ಈ ಶರಣಾಗತಿಯನ್ನು ಸ್ವೀಕರಿಸ ಬೇಕು ಎಂದು ಹೇಳಿದೆ.

**207. "ಚಚಾಲ ಚಾಪಂಚ ಮುಮೋಚ ವೀರಃ" ಎನ್ಗಿರಪಡಿಯೇ ಇವೈ ಅನುಪಾಯಂಗಳಾನ ಮಾತ್ರಮನ್ರಿಕ್ಕೇ ಕಾಲ್-ಕಟ್ಟೆನ್ಗಿರದು.**

"ಚಚಾಲ ಚಾಪಂಚ ಮುಮೋಚ ವೀರಃ" ಎಂದು ಶ್ರೀರಾಮಾಯಣದಲ್ಲಿ ಹೇಳಿರುವಂತೆ (ವೀರನಾದ ರಾವಣನು ತನ್ನ ಬಾಣಗಳನ್ನು ಕೆಳಗೆ ಹಾಕಿದ ಮೇಲೆ ರಾಮನು ಅವನ ಮೇಲೆ ಬಾಣ ಪ್ರಯೋಗ ಮಾಡದೆ ಅವನನ್ನು ಕಳುಹಿಸಿದನು ಎಂದು ಹೇಳಿದೆ. ಅವನು ಬಾಣವನ್ನು ಧರಿಸಿದ್ದುದೇ ತಡೆಯಾಗಿ ಇದ್ದಂತೆ) ಈ ಉಪಾಯಾಂತರಗಳ ಅನುಷ್ಠಾನವು ಭಗವದನುಗ್ರಹಕ್ಕೆ ಅನುಪಾಯಗಳಾಗಿರುವುದು ಮಾತ್ರವಲ್ಲದೆ ಅವು ಅದಕ್ಕೆ ತಡೆಯಾಗಿಯೂ ಇವೆ.

**208. ಚಕ್ರವರ್ತಿಯೈಪ್ಪೋಲೆ ಇಳಕ್ಕೈಕ್ಕುರುಪ್ಪು.**

ಈ ಉಪಾಯಾಂತರಗಳ ಅನುಷ್ಠಾನವು ಶ್ರೀದಶರಥ ಮಹಾರಾಜನಂತೆ ಭಗವತ್ಪ್ರಾಪ್ತಿಯನ್ನು ಕಳೆದುಕೊಳ್ಳುವುದಕ್ಕೆ ಕಾರಣವಾಗುತ್ತದೆ. (ದಶರಥ ಮಹಾರಾಜನು ತಾನು ಕೈಕೆಯಿಗೆ ಕೊಟ್ಟ ವಚನವನ್ನು ಪರಿಪಾಲಿಸಬೇಕೆಂಬ ಆಭಾಸ ಧರ್ಮವನ್ನು ನಿಷ್ಠೆಯಿಂದ ಆಚರಿಸಿ ಸನಾತನ ಧರ್ಮವಾದ ಪರಮಾತ್ಮನಾದ ಶ್ರೀರಾಮನನ್ನೇ ಕಳೆದುಕೊಂಡನು.)

**209. “ಸರ್ವಧರ್ಮಂಗಳೈಯುಮ್ ವಿಟ್ಟು” ಎನ್ರು ಶೊಲ್ಲುಗೈಯಾಲೇ ಶಿಲರ್ ಅಧರ್ಮಂಗಳ್ ಪುಗುರುಮೆನ್ರಾರ್ಕಳ್.**

ಇಲ್ಲಿ “ಸರ್ವಧರ್ಮಗಳನ್ನು ಬಿಟ್ಟು” ಎಂದು ಹೇಳಿರುವುದರಿಂದ ಅಧರ್ಮಗಳನ್ನು ಆಚರಿಸು ಎಂದು ಹೇಳಿದಂತಾಗುತ್ತದೆ- -ಎಂದು ಕೆಲವರು ಆಕ್ಷೇಪಿಸುತ್ತಾರೆ.

**210. ಅದು ಕೂಡಾದು; “ಅಧರ್ಮಂಗಳೈಚ್ಚೆಯ್” ಎನ್ರು ಶೊಲ್ಲಾನ್ಮೈಯಾಲೆ.**

ಆದರೆ ಅದು ಕೂಡದು. ಏಕೆಂದರೆ ಅಧರ್ಮಗಳನ್ನು ಮಾಡು ಎಂದು ಇಲ್ಲಿ ಹೇಳಿಲ್ಲ. (ಧರ್ಮಗಳನ್ನು ಬಿಡು ಎಂದು ಮಾತ್ರ ಹೇಳಿದೆ.)

**211. ತನ್ನಡೈಯೇ ಶೊಲ್ಲಿತ್ತಾಗಾದೋ ವೆನ್ನಿಲ್;**

ತಾನಾಗಿಯೇ ಹೇಳಿದಂತೆ ಆಗಲಿಲ್ಲವೇ ಎಂದರೆ (ಧರ್ಮ ಶಬ್ದದಲ್ಲಿ ಧರ್ಮವನ್ನು ಮಾಡುವುದು ಮತ್ತು ಅಧರ್ಮವನ್ನು ಬಿಡುವುದು ಎರಡೂ ಸೇರಿರುವಾಗ ಧರ್ಮವನ್ನು ಬಿಡು ಎಂದರೆ ಧರ್ಮವನ್ನು ಮಾಡಬೇಡ ಅಧರ್ಮವನ್ನು ಬಿಡಬೇಡ ಎಂದು ತಾನಾಗಿಯೇ ಹೇಳಿದಂತೆ ಆಗಲಿಲ್ಲವೆ– ಎಂದರೆ)

**212. ಆಗಾದು; ಧರ್ಮಶಬ್ದನ್ ಅಧರ್ಮನಿವೃತ್ತಿಯೈ ಕ್ಕಾಟ್ಟಾನ್ಮೈಯಾಲೆ.**

ಹಾಗೆ ಆಗುವುದಿಲ್ಲ. ಏತಕ್ಕೆಂದರೆ “ಧರ್ಮ” ಶಬ್ದವು ಅಧರ್ಮ ನಿವೃತ್ತಿಯನ್ನು ಹೇಳುವುದಿಲ್ಲ.

**213. ಕಾಟ್ಟಿನಾಲುಮ್ ಅತ್ತೈಯೊಳಿಂದವತ್ತೈ ಚ್ಚೊಲ್ಲಿತ್ತಾಮಿತ್ತನೈ.**

ಹಾಗೆ ಹೇಳಿದರೂ ಕೂಡ ಅದನ್ನು ಬಿಟ್ಟು ಕೇವಲ ಧರ್ಮದ ವಿಷಯವನ್ನು ಮಾತ್ರ ಇಲ್ಲಿ ಹೇಳಿದೆ.

**214. ತನ್ನೈಯುಮ್ ಈಶ್ವರನ್ನೈಯುಮ್ ಫಲತ್ತೈಯುಮ್ ಪಾರ್ತ್ತಾಲ್ ಅನ್ವೈ ಪುಗುರವಳಿಯಿಲ್ಲೈ.**

(ಅಧರ್ಮಾಚರಣೆಯು ಪರಮಾತ್ಮನಿಗೆ ಅಪ್ರಿಯವಾದುದಾಗಿರುವುದರಿಂದ) ತನ್ನ(ಆತ್ಮನ) ಸ್ವರೂಪವನ್ನೂ, ಪರಮಾತ್ಮನ ಸ್ವರೂಪವನ್ನೂ, (ಭಗವತ್ಪ್ರಾಪ್ತಿ ಎಂಬ)ಫಲದ ಸ್ವರೂಪವನ್ನೂ ನೋಡಿದರೆ ಅಧರ್ಮಗಳು ಸೇರಲು ಅವಕಾಶವಿಲ್ಲ.

## ಮಾಂ ಎಂಬ ಪದದ ಅರ್ಥ

### (ಸೂತ್ರಗಳು 215 ರಿಂದ 223)

**215.** "ಮಾಮ್"

ಮಾಂ=ನನ್ನನ್ನು

**216.** **ಸರ್ವರಕ್ಷಕನಾಯ್ ಉನಕ್ಕು ಕೈಯಾಳಾಯ್ ಉನ್ನೈಪ್ಪಾರ್ತ್ತು ಉನ್ ದೋಷತ್ತೈ ಭೋಗ್ಯಮಾಗಕ್ಕೊಂಡು ಉನಕ್ಕುಪ್ಪುಗಲಾಯ್, ನೀರ್ ಶುಡುಮಾಪೋಲೇ ಶೇರ್-ಪ್ಪಾರೇ ಪಿರಿಕ್ಕುಮ್ ಪೋದುಮ್ ವಿಡಮಾಟ್ಟಾದೇ ರಕ್ಷಿಕ್ಕಿರ ಎನ್ನೈ.**

ಸರ್ವರಕ್ಷಕನಾಗಿ, ನಿನಗೆ ಕೈ ಆಳಾಗಿ, ನಿನ್ನ ಮನೋರಥವನ್ನೇ ಎದುರು ನೋಡುತ್ತಾ, ನಿನ್ನ ದೋಷಗಳನ್ನು ಭೋಗ್ಯವಾಗಿ ಹೊಂದಿ, ನಿನಗೆ ಆಶ್ರಯನಾಗಿ, ತಣ್ಣಗಿರುವ ನೀರೂ ಕಾಸಿದರೆ ಬಿಸಿಯಾಗುವಂತೆ, ಪುರುಷಕಾರಭೂತೆಯಾದ ಶ್ರೀದೇವಿಯೇ ಒಂದುವೇಳೆ ದೂರ ಸರಿಸಿದರೂ ಬಿಡದೆ ರಕ್ಷಿಸುವವನಾಗಿರುವ ನನ್ನನ್ನು;

**217.** **ಇತ್ತಾಲ್ ಪರವ್ಯೂಹಂಗಳೈಯುಮ್ ದೇವತಾಂತರ್ಯಾಮಿತ್ವ-ತ್ತೈಯುಮ್ ತವಿರ್ಕ್ಕಿರದು.**

ಮಾಂ ಎಂದು (ಕಣ್ಣಿಗೆ ಕಾಣಿಸುತ್ತಾ ಹತ್ತಿರಕ್ಕೆ ಬಂದು ನಿಂತಿರುವ) ಕೃಷ್ಣಾವತಾರದ ವಿಭವರೂಪವನ್ನು ತೋರಿಸುವುದರಿಂದ (ಕಣ್ಣಿನಿಂದ ನೋಡಲು, ಹತ್ತಿರ ಹೋಗಲೂ ಸಾಧ್ಯವಿಲ್ಲದೇ ಇರುವ) ಪರಮಾತ್ಮನ

ಪರರೂಪ, ವ್ಯೂಹರೂಪಗಳನ್ನೂ ದೇವತಾಂತರ್ಯಾಮಿತ್ವರೂಪಗಳನ್ನೂ ಇಲ್ಲಿ (ಶರಣಾಗತಿಗೆ) ಉಪಾಯಗಳಾಗಿ ಹೇಳಿಲ್ಲ.

**218. ಧರ್ಮಸಂಸ್ಥಾಪನಮ್ ಪಣ್ಣಪ್ಪಿರಂದವನ್ ತಾನೇ "ಸರ್ವ ಧರ್ಮಂಗಳೈಯುಮ್‌ವಿಟ್ಟು ಎನ್ನೈಪತ್ತು" ಎನ್‌ಗೈಯಾಲೇ ಸಾಕ್ಷಾತ್‌ಧರ್ಮಮ್ ತಾನೇ ಎನ್ಗಿರದು.**

ಧರ್ಮಸಂಸ್ಥಾಪನೆ ಮಾಡುವುದಕ್ಕಾಗಿಯೇ ಅವತರಿಸಿದ ಕೃಷ್ಣ ಪರಮಾತ್ಮನು ತಾನೇ ಸರ್ವಧರ್ಮಗಳನ್ನೂ ತ್ಯಜಿಸಿ ನನ್ನನ್ನು ಆಶ್ರಯಿಸು ಎಂದು ಹೇಳಿರುವುದರಿಂದ ಸಾಕ್ಷಾತ್ ಧರ್ಮವು ತಾನೇ (ಪರಮಾತ್ಮನೇ) ಎಂಬುದು ತಿಳಿಯಬರುತ್ತದೆ.

**219. ಇತ್ತಾಲ್ ವಿಟ್ಟಸಾಧನಂಗಳಿಲ್ ಏತ್ತಮ್ ಶೊಲ್ಲುಗಿರದು.**

ಇದರಿಂದ ಹಿಂದೆ ತ್ಯಜಿಸು ಎಂದು ಹೇಳಿರುವ ಸಾಧನೆಗಳಿಗಿಂತ ಈ ಸಾಧನಕ್ಕೆ (ಭಗವತ್ ಶರಣ ವರಣಕ್ಕೆ) ಇರುವ ಹಿರಿಮೆಯು ತಿಳಿಸಲ್ಪಟ್ಟಿದೆ.

**220. ಅದಾವದು—ಸಿದ್ಧಮಾಯ್ ಪರಮಚೇತನಮಾಯ್ ಸರ್ವ-ಶಕ್ತಿಯಾಯ್ ನಿರಪಾಯಮಾಯ್ ಪ್ರಾಪ್ತಮಾಯ್ ಸಹಾ-ಯಾಂತರ ನಿರಪೇಕ್ಷಮಾಯಿರುಕ್ಕೈ.**

ಅದೇನೆಂದರೆ ಇದು ಸಿದ್ಧ ಧರ್ಮವಾಗಿದೆ. (ಇದನ್ನು ಅವುಗಳಂತೆ ಸಾಧನೆಮಾಡಿ ಪಡೆಯಬೇಕಾಗಿಲ್ಲ); ಇದು ಸರ್ವಜ್ಞನಾದ ಪರಮಾತ್ಮನ ಸ್ವರೂಪವಾಗಿ ಪರಮ ಚೇತನವಾಗಿದೆ. (ಅವುಗಳಿಗೆ ಚೈತನ್ಯ ಸ್ವರೂಪ ವಿಲ್ಲ); ಇದು ಸರ್ವಶಕ್ತಿಯುತವಾಗಿದೆ. (ಅವುಗಳಿಗೆ ಶಕ್ತಿಯಿಲ್ಲ); ಇದು ನಿರಪಾಯವಾಗಿದೆ. (ಅವುಗಳ ಅನುಷ್ಠಾನದಲ್ಲಿ ಅಪಾಯಕ್ಕೆ ಆಸ್ಪದವುಂಟು); ಇದು ಚೇತನನ ಸ್ವರೂಪಕ್ಕೆ ಪ್ರಾಪ್ತವಾದುದಾಗಿದೆ (ಅವುಗಳು ಚೇತನನ ಶೇಷತ್ವ ಪಾರತಂತ್ರ ಸ್ವರೂಪಕ್ಕೆ ಅಪ್ರಾಪ್ತವಾದವು ಗಳಾಗಿವೆ); ಇದು ಪರಮಚೇತನನಾದ ಪರಮಾತ್ಮನೇ ಆಗಿರುವುದರಿಂದ ಇದಕ್ಕೆ ಇತರ ಸಹಾಯಗಳ ಅಪೇಕ್ಷೆಯಿಲ್ಲ. (ಇತರ ಸಾಧನಗಳು ಅಚೇತನವಾಗಿರುವುದರಿಂದ ಅವುಗಳಿಗೆ ಚೇತನನ ಮತ್ತು ಪರಮಾತ್ಮನ ಸಹಾಯವು ಅತ್ಯಗತ್ಯವಾಗಿದೆ.)

**221. ಮತ್ತೈ ಉಪಾಯಂಗಳ್ ಸಾಧ್ಯಂಗಳಾಗೈಯಾಲೆ ಸ್ವರೂಪಸಿದ್ಧಿಯಿಲ್ ಚೇತನನೈ ಅಪೇಕ್ಷಿತ್ತಿರುಕ್ಕುಮ್; ಅಚೇತನಂಗಳುಮಾಯ್, ಅಶಕ್ತಂಗಳುಮಾಯಿರುಕ್ಕೈಯಾಲೆ ಕಾರ್ಯಸಿದ್ಧಿಯಿಲ್ ಈಶ್ವರನೈ ಅಪೇಕ್ಷಿತ್ತಿರುಕ್ಕುಮ್. ಇಂದ ಉಪಾಯಮ್ ಅವತ್ತುಕ್ಕೆದಿರ್‌ತ್ತಟ್ಟಾಯಿರುಕ್ಕೈಯಾಲೇ ಇತರ ನಿರಪೇಕ್ಷಮಾಯ್ ಇರುಕ್ಕುಮ್.**

ಇತರ ಉಪಾಯಗಳು (ಚೇತನನು ಅನುಷ್ಠಿಸಿ ಪಡೆಯಬೇಕಾದವುಗಳಾಗಿ) ಸಾಧ್ಯಗಳಾಗಿರುವುದರಿಂದ ಸ್ವರೂಪ ಸಿದ್ಧಿಯಲ್ಲಿ ಚೇತನನನ್ನು ಅಪೇಕ್ಷಿಸುವವುಗಳಾಗಿ ಇವೆ. ಅವು ಅಚೇತನಗಳಾಗಿ ಅಶಕ್ತಗಳಾಗಿರುವುದರಿಂದ ಕಾರ್ಯಸಿದ್ಧಿಯಲ್ಲಿ ಪರಮಾತ್ಮನನ್ನು ಅಪೇಕ್ಷಿಸುವವುಗಳಾಗಿವೆ. ಆದರೆ ಈ ಉಪಾಯವು ಅವುಗಳಿಗೆ ವ್ಯತಿರಿಕ್ತವಾಗಿರುವುದರಿಂದ ಸಹಾಯಾಂತರ ನಿರಪೇಕ್ಷವಾಗಿದೆ. (ಇಲ್ಲಿ ಸಾಕ್ಷಾತ್ ಪರಮಾತ್ಮನೇ ಉಪಾಯವಾಗಿರುವುದರಿಂದ ಬೇರೆ ಯಾವುದರ ಸಹಾಯವೂ ಇದಕ್ಕೆ ಬೇಕಾಗಿಲ್ಲ.)

**222. ಇದಿಲೇ ವಾತ್ಸಲ್ಯ ಸ್ವಾಮಿತ್ವ ಸೌಶೀಲ್ಯ ಸೌಲಭ್ಯಂಗಳಾಗಿರ ಗುಣವಿಶೇಷಂಗಳ್ ನೇರಾಗ ಪ್ರಕಾಶಿಕ್ಕಿರದು.**

ಈ 'ಮಾಂ' ಎಂಬ ಪದದಲ್ಲಿ (ಚೇತನನು ಆಶ್ರಯಿಸುವುದಕ್ಕೆ ಬೇಕಾದ) ವಾತ್ಸಲ್ಯ, ಸ್ವಾಮಿತ್ವ, ಸೌಶೀಲ್ಯ, ಸೌಲಭ್ಯಾದಿ ಗುಣ ವಿಶೇಷಗಳೆಲ್ಲಾ ಸಾಕ್ಷಾತ್ತಾಗಿ ಪ್ರಕಾಶಿಸುತ್ತಿವೆ. (ಅಧರ್ಮವನ್ನು ಧರ್ಮವಾಗಿ ಭಾವಿಸಿ ಯುದ್ಧಮಾಡುವುದಿಲ್ಲವೆಂದು ಕುಳಿತ ಅರ್ಜುನನ ದೋಷವನ್ನು ನೋಡದೆ ಅವನಿಗೆ ಗೀತೋಪದೇಶವನ್ನು ಮಾಡಿರುವುದರಿಂದ ಪರಮಾತ್ಮನ ವಾತ್ಸಲ್ಯಗುಣವೂ, ತನ್ನ ಪರತ್ವವನ್ನು ಉಪದೇಶಿಸಿದ್ದುದು ಮಾತ್ರವಲ್ಲದೆ ಅವನಿಗೆ ವಿಶ್ವರೂಪದರ್ಶನ ನೀಡಿದ್ದರಿಂದ ಪರಮಾತ್ಮನ ಸ್ವಾಮಿತ್ವವೂ, ಅರ್ಜುನನೊಂದಿಗೆ ಸ್ನೇಹಿತನಂತೆ ನಡೆದುಕೊಂಡುದರಿಂದ ಪರಮಾತ್ಮನ ಸೌಶೀಲ್ಯವೂ ಮತ್ತು ತನ್ನ ಅಪ್ರಾಕೃತವಾದ ದಿವ್ಯಸ್ವರೂಪವನ್ನು ಅವನ ಕಣ್ಣಿಗೆ ಕಾಣಿಸುವಂತೆ ಮಾಡಿದ್ದುದರಿಂದ ಸೌಲಭ್ಯವೂ ಇಲ್ಲಿ ಪ್ರಕಾಶಿಸಲ್ಪಟ್ಟಿದೆ.)

**223. ಕೈಯುಮ್ ಉಳವುಕೋಲುಮ್ ಪಿಡಿತ್ತ ಶಿರುವಾಯ್‌ಕ್ಕಯಿರುಮ್ ಸೇನಾಧೂಳಿಧೂಸರಿತಮಾನ ತಿರುಕ್ಕುಳಲುಮ್ ತೇರುಕ್ಕುಕ್ಕೀಳೆ ನಾತ್ತಿನ ತಿರುವಡಿಗಳುಮಾಯ್ ನಿಱ್ಕಿರ**

**ಸಾರಥ್ಯವೇಷತ್ತೈ "ಮಾಮ್" ಎನ್ರು ಕಾಟ್ಟುಗಿರಾನ್.**

ರಣರಂಗದಲ್ಲಿ ಕುದುರೆಗಳನ್ನು ಓಡಿಸುವುದಕ್ಕಾಗಿ ಚಾವಟಿಯನ್ನೂ ಕಡಿವಾಣವನ್ನೂ ಹಿಡಿದಿರುವ ಕೈಯ್ಯೇನು, ಧೂಳೀದೂಸರಿತವಾದ ತಲೆಯ ಕೂದಲುಗಳೇನು, ರಥದ ಕೆಳಗೆ ಇಳಿಬಿಟ್ಟ ಪಾದಗಳೇನು, ಇವುಗಳೊಂದಿಗೆ ಕೂಡಿರುವ ಸಾರಥಿಯ ರೂಪವನ್ನೇ 'ಮಾಂ' ಎಂದು ಶ್ರೀಕೃಷ್ಣ ಇಲ್ಲಿ ತೋರಿಸುತ್ತಾನೆ. (ಇದರಿಂದ ಕೇವಲ ಅವತಾರ ಪ್ರಯುಕ್ತವಾದ ಸೌಲಭ್ಯ ಮಾತ್ರವಲ್ಲದೆ ರಥದ ಸಾರಥಿಯಾಗಿ ಬಂದು ನಿಂತಿರುವ ಪರಮ ಸೌಲಭ್ಯವೂ ಪ್ರಕಾಶಿಸುತ್ತದೆ.)

## 'ಏಕಂ' ಎಂಬ ಪದದ ಅರ್ಥ

### (ಸೂತ್ರಗಳು 224 ರಿಂದ 240)

**224. "ಏಕಮ್."**

ಏಕಂ=ಒಬ್ಬನನ್ನೇ

**225. ಇಂದ ಏಕಶಬ್ದಮ್ ಸ್ಥಾನಪ್ರಮಾಣತ್ತಾಲೇ ಅವಧಾರಣಾರ್ಥತ್ತೈ ಕಾಟ್ಟುಗಿರದು.**

ಈ ಏಕ ಶಬ್ದವು ಸ್ಥಾನ ಪ್ರಮಾಣದಿಂದ ಅವಧಾರಣಾರ್ಥವನ್ನು ತಿಳಿಸುತ್ತದೆ. (ಇದು 'ಮಾಂ' ಎಂಬ ಪದಕ್ಕೂ 'ಶರಣಂ' ಎಂಬ ಪದಕ್ಕೂ ಮಧ್ಯ ಸ್ಥಾನದಲ್ಲಿ ಇರುವುದರಿಂದ ಇದೂ ಉಕಾರದಂತೆ 'ಏವ' ಎಂಬ ಅವಧಾರಣಾರ್ಥವನ್ನು ತಿಳಿಸುತ್ತದೆ; ಅಂದರೆ 'ಮಾಂ ಏಕಂ ಶರಣಂ ವ್ರಜ'—ನನ್ನೊಬ್ಬನನ್ನೇ ಶರಣವಾಗಿ ವರಿಸು ಎಂದು ಅರ್ಥ.)

**226. "ಮಾಮೇವ ಯೇ ಪ್ರಪದ್ಯಂತೇ" "ತಮೇವ ಚಾದ್ಯಮ್" "ತ್ವಮೇವೋಪಾಯಭೂತೋ ಮೇ ಭವ" "ಆರೆನಕ್ಕು ನಿನ್ ಪಾದಮೇ ಶರಣಾಗ ತ್ತಂದೊಳಿಂದಾಯ್" ಎನ್ರುಮ್ ಶೊಲ್ಲುಗಿರಪಡಿಯೇ.**

'ಮಾಮೇವ ಯೇ ಪ್ರಪದ್ಯಂತೇ'—(ಅಂದರೆ ಯಾರು ನನ್ನನ್ನೇ ಶರಣನಾಗಿ ಆಶ್ರಯಿಸುತ್ತಾರೋ ಅವರು ಈ ಪ್ರಕೃತಿಯ ಮಾಯೆಯನ್ನು ದಾಟುತ್ತಾರೆ) ಎಂದು ಗೀತೆಯ (7–14) ಶ್ಲೋಕದಲ್ಲೂ; 'ತಮೇವ ಚಾದ್ಯಮ್ ಪುರುಷಂ ಪ್ರಪದ್ಯೇ' (ಅಂದರೆ ಆಧ್ಯನಾದ ಆ ಪುರುಷನನ್ನೇ ಪ್ರಪತ್ತಿ ಮಾಡುತ್ತೇನೆ) ಎಂದು ಗೀತೆಯ (15–4) ಶ್ಲೋಕದಲ್ಲೂ; 'ತ್ವಮೇವೋಪಾಯಭೂತೋ ಮೇ ಭವ' (ಅಂದರೆ ನೀನೇ ನನಗೆ ಉಪಾಯಭೂತನಾಗಬೇಕು) ಎಂದು ವಿಶ್ವಕ್ಸೇನ ಸಂಹಿತೆಯಲ್ಲೂ; "ಆರೆನಕ್ಕು ನಿನ್ ಪಾದಮೇ ಶರಣಾಗ ತ್ತಂದೊಳಿಂದಾಯ್" (ಅಂದರೆ ನನ್ನ ರಕ್ಷಣೆಗಾಗಿ ನಿನ್ನ ಪಾದಗಳನ್ನೇ ಉಪಾಯವಾಗಿ ತಂದಿದ್ದೀಯೆ) ಎಂದು ತಿರುವಾಯ್ಮೊಳಿ (5–7–10) ಪಾಶುರದಲ್ಲಿಯೂ ಮಾಮೇವ, ತಮೇವ, ತ್ವಮೇವ, ನಿನ್‌ಪಾದಮೇ ಎಂದು ತಿಳಿಸಿರುವಂತೆ ಈ ಏಕ ಶಬ್ದವು ಉಕಾರದಲ್ಲಿ ತಿಳಿಸಿರುವಂತೆ ಏವ ಎಂಬ ಅರ್ಥವನ್ನು ತಿಳಿಸುತ್ತದೆ. (ಮಾಂ ಏಕಂ=ನನ್ನೊಬ್ಬನನ್ನೇ—ಎಂದು ಅರ್ಥ.)

**227. ಇತ್ತಾಲ್, "ವ್ರಜ" ಎನ್ಗಿರ ಸ್ವೀಕಾರತ್ತಿಲ್ ಉಪಾಯ ಭಾವತ್ತೈ ತ್ತವಿರ್‌ಕಿರದು.**

ಆದರೆ ಇಲ್ಲಿ ಈ ಏಕ ಶಬ್ದವು 'ವ್ರಜ' ಎಂಬ ಉಪಾಯ ಸ್ವೀಕಾರದಲ್ಲಿ (ಶರಣಾಗತಿ ಮಾಡುವುದರಲ್ಲಿ) ಉಪಾಯ ಭಾವವನ್ನು ಬಿಡಿಸುತ್ತದೆ.

(ಅಂದರೆ ಈ ಶರಣಾಗತಿಯಲ್ಲಿ ಉಪಾಯ ಬುದ್ಧಿಯನ್ನು ತ್ಯಜಿಸು ಎಂದು ತಿಳಿಸುತ್ತದೆ. ಪರಮಾತ್ಮನಾದ ನಾನೊಬ್ಬನೇ ಉಪಾಯವೇ ವಿನಃ ಬೇರೆ ಯಾರೂ, ಯಾವುದೂ, ಶರಣಾಗತಿಯೂ ಉಪಾಯವಲ್ಲ ಎಂಬುದನ್ನು ಈ ಏಕ ಶಬ್ದವು ಪ್ರತಿಪಾದಿಸುತ್ತದೆ.)

**228. ಸ್ವೀಕಾರಂದಾನುಮ್ ಅವನಾಲೇ ವಂದದು.**

ಈ ಉಪಾಯ ಸ್ವೀಕಾರವೂ ಕೂಡ ಅಂದರೆ ಶರಣಾಗತಿಯೂ ಕೂಡ ಅವನಿಂದಲೇ (ಪರಮಾತ್ಮನಿಂದಲೇ) ಉಂಟಾದುದು. (ಆದ್ದರಿಂದ ಈ ಶರಣಾಗತಿಯು ಉಪಾಯ ಕಾರ್ಯವೇ ವಿನಃ ಉಪಾಯವಾಗಲಾರದು ಎಂದು ಅರ್ಥ.)

**229. ಸೃಷ್ಟ್ಯವತಾರಾದಿ ಮುಖತ್ತಾಲೇ ಪಣ್ಣಿನ ಕೃಷಿಫಲಮ್.**

ಪರಮಾತ್ಮನು ಜಗತ್ತನ್ನೂ ಚೇತನನನ್ನೂ ಸೃಷ್ಟಿಸಿ, ತಾನು ಜಗತ್ತಿನಲ್ಲಿ

ಅವತರಿಸಿ ಮಾಡಿದ (ತನ್ನ ಗುಣ ಚೇಷ್ಟಿತಾದಿಗಳನ್ನು ತೋರಿಸಿ ಚೇತನ ನನ್ನು ತನ್ನಲ್ಲಿ ಶರಣನಾಗುವಂತೆ ಮಾಡಿದ) ಅವನ ಕಾರ್ಯಗಳಿಂದ ಉಂಟಾದ ಕೃಷಿಫಲವೇ ಈ ಉಪಾಯಸ್ವೀಕಾರವು (ಶರಣಾಗತಿಯು).

**230.** **"ಅದುವ್ವುಮವನದಿನ್ನರುಳೇ."**

'ಅದುವುಂ ಅವನ ದಿನ್ನರುಳೇ' ಎಂದು ತಿರುವಾಯ್ಮೊಳಿ (2-7-6) ಪಾಶುರದಲ್ಲಿ ತಾವು ಪರಮಾತ್ಮನಲ್ಲಿ ಮಾಡಿದ ಶರಣವರಣವನ್ನು ತಿಳಿಸಿ, ಆ ಉಪಾಯ ಸ್ವೀಕಾರವೂ ಕೂಡ ಅವನ ನಿರ್ಹೇತುಕ ಕೃಪೆಯಿಂದ ಉಂಟಾದುದು ಎಂದು ಹೇಳಿರುವುದರಿಂದ, ಈ ಶರಣಾಗತಿಯೂ ಪರಮಾತ್ಮನ ಕೃಪೆಯಿಂದ ಉಂಟಾದುದೆಂದು ತಿಳಿಯಬೇಕು.

**231.** **ಇತ್ತೈಯೊಳಿಯುವ್ವುಮ್ ತಾನೇ ಕಾರ್ಯಮ್ ಶೆಯ್ಯುಮೆನ್ರು ನಿನೈಕ್ಕಕ್ಕಡವನ್.**

ಈ ಉಪಾಯಸ್ವೀಕಾರವು (ಶರಣಾಗತಿಯು) ಇಲ್ಲದೇ ಹೋದರೂ ಪರಮಾತ್ಮನು ತಾನಾಗಿಯೇ ಚೇತನನಿಗೆ ಅವನ ಇಷ್ಟಗಳನ್ನು ಕೊಟ್ಟು ಅವನ ರಕ್ಷಣಾಕಾರ್ಯವನ್ನು ಮಾಡುವನು ಎಂದು ನೆನೆಸತಕ್ಕದ್ದು.

**232.** **ಅಲ್ಲಾದಪ್ಪೋದು ಉಪಾಯ ನೈರಪೇಕ್ಷ್ಯಮ್ ಜೀವಿಯಾದು.**

ಹಾಗೆ ನೆನೆಸದೇ ಇದ್ದರೆ (ಅಂದರೆ ಪರಮಾತ್ಮನು ರಕ್ಷಿಸಲು ಈ ಶರಣ ವರಣವು ಬೇಕು ಎಂದು ನೆನೆಸಿದರೆ) ಈ ಸಿದ್ಧೋಪಾಯವು ನಿರಪೇಕ್ಷ ವಾದುದು (ಅಂದರೆ ಒಂದು ಸಹಾಯವನ್ನೂ ಕೋರದುದು) ಎಂಬ ಇದರ ಹಿರಿಮೆ ಹೋಗಿಬಿಡುತ್ತದೆ.

**233.** **ಇದು ಸರ್ವಮುಕ್ತಿಪ್ರಸಂಗಪರಿಹಾರಾರ್ಥಮ್, ಬುದ್ಧಿಸಮಾ-ಧಾನಾರ್ಥಮ್, ಚೈತನ್ಯಕಾರ್ಯಮ್, ರಾಗಪ್ರಾಪ್ತಮ್, ಸ್ವರೂಪನಿಷ್ಠಮ್ ಅಪ್ರತಿಷೇಧದ್ಯೋತಕಮ್.**

ಹಾಗಾದರೆ ಈ ಉಪಾಯ ಸ್ವೀಕಾರವು (ಅಂದರೆ ಶರಣವರಣವು ಅಥವ ಶರಣಾಗತಿ ಮಾಡುವುದು) ಏತಕ್ಕಾಗಿ ಎಂದರೆ—ಸರ್ವಮುಕ್ತಿಪ್ರಸಂಗ ಪರಿಹಾರಕ್ಕಾಗಿಯೂ (ಅಂದರೆ ಜಗತ್ತಿನಲ್ಲಿರುವ ಸರ್ವರಿಗೂ ಸಮನಾಗಿ ಕೂಡಲೇ ಮುಕ್ತಿ ಲಭಿಸಬೇಕೆಂಬ ಪ್ರಸಂಗವನ್ನು ಪರಿಹರಿಸುವುದ ಕ್ಕಾಗಿಯೂ);—ಬುದ್ಧಿ ಸಮಾಧಾನಕ್ಕಾಗಿಯೂ ಅಂದರೆ (ಪರಮಾತ್ಮನು

ಶರಣನಾದ ತನ್ನನ್ನು ರಕ್ಷಿಸುತ್ತಾನೆ ಎಂಬ ಬುದ್ಧಿ ಹೊಂದಿ ಮನಸ್ಸನ್ನು ಸಮಾಧಾನಪಡಿಸಿಕೊಳ್ಳುವುದಕ್ಕಾಗಿಯೂ);—ಇದು ಚೈತನ್ಯ ಕಾರ್ಯ ವಾಗಿರುವುದರಿಂದಲೂ (ಅಂದರೆ ಚೇತನನಿಗೆ ಪರಮಾತ್ಮನೇ ತನಗೆ ಉಪಾಯವೆಂಬ ಅಧ್ಯವಸಾಯವು ಅವನ ಚೈತನ್ಯ ಕಾರ್ಯವಾಗಿ ಉಂಟಾ ಗಿರುವುದರಿಂದಲೂ);— ರಾಗಪ್ರಾಪ್ತವಾಗಿರುವುದರಿಂದಲೂ (ಅಂದರೆ ಸುಕರವಾದ ಈ ಉಪಾಯವು ರಕ್ಷಕನಾದ ಪರಮಾತ್ಮನಲ್ಲಿ ಪ್ರೇಮ (ರಾಗ) ದಿಂದ ಉಂಟಾದುದಾಗಿರುವುದರಿಂದಲೂ);—ಚೇತನನ ಸ್ವರೂಪದಲ್ಲಿ (ಭಗವದೇಕರಕ್ಷಕತ್ವರೂಪವಾದ ಸ್ವರೂಪದಲ್ಲಿ) ಇದು ಸೇರಿಕೊಂಡಿರು ವುದರಿಂದಲೂ; ಅಪ್ರತಿಷೇದಧ್ಯೋತಕವಾಗಿರುವುದರಿಂಡಲೂ (ಅಂದರೆ ಚೇತನನು ಪರಮಾತ್ಮನ ರಕ್ಷಣಾಕಾರ್ಯವನ್ನು ವಿರೋಧಿಸುವ ತನ್ನ ಸ್ವ ಪ್ರವೃತ್ತಿಗಳನ್ನು ಬಿಟ್ಟು ಅವನ ರಕ್ಷಣಾಕಾರ್ಯವನ್ನು ತಡೆಯದೇ ಇರುವುದನ್ನು ಈ ಶರಣವರಣವು ಪ್ರಕಾಶಪಡಿಸುವುದರಿಂದಲೂ) ಈ ಕಾರಣಗಳಿಗಾಗಿ ಶರಣವರಣವೇ (ಶರಣಾಗತಿಯೇ) ವಿನಃ ಅದು ತಾನೇ ಸ್ವತಃ ಉಪಾಯವಲ್ಲ ಎಂಬುದು ತಿಳಿಸಲ್ಪಟ್ಟಿದೆ.

**234. ಕೀಳ್ ತಾನುಮ್ ಪಿರರುಮಾನ ನಿಲೈಯೈಕ್ಕುಲೈತ್ತಾನ್; ಇಂಗು ತಾನುಮ್ ಇವನುಮಾನ ನಿಲೈಯೈ ಕ್ಕುಲೈಕ್ಕಿರಾನ್.**

ಹಿಂದೆ 'ಸರ್ವಧರ್ಮಾನ್ ಪರಿತ್ಯಜ್ಯ ಮಾಂ' ಎಂದು ಹೇಳಿ ತಾನೂ ಇತರ ಸಾಧನೋಪಾಯಗಳೂ ಸೇರಿ ಚೇತನನ ರಕ್ಷಣೆ ಮಾಡುವ ನೆಲೆಯನ್ನು ಪರಿಹರಿಸಿದನು. ಈಗ 'ಮಾಂ–ಏಕಂ' ಎಂದು ಹೇಳಿ ತಾನೂ, ಶರಣ ನಾದ ಚೇತನನೂ ಸೇರಿ ಅವನ ರಕ್ಷಣೆ ಮಾಡುವ ನೆಲೆಯನ್ನು ಪರಿಹರಿಸು ತ್ತಾನೆ. (ಅಂದರೆ ಪರಮಾತ್ಮನ ರಕ್ಷಣಾಕಾರ್ಯಕ್ಕೆ ಚೇತನನು ಮಾಡುವ ಸಾಧನೋಪಾಯಗಳ ಸಹಾಯವಾಗಲಿ,ಸಿದ್ಧೋಪಾಯ ನಿಷ್ಠ ನಾಗಿ ಶರಣಾಗತಿ ಮಾಡುವ ಚೇತನನ ಸಹಾಯವಾಗಲಿ ಬೇಕಾಗಿಲ್ಲ. ಅವು ಯಾವುದರ ಅಪೇಕ್ಷೆಯೂ ಇಲ್ಲದೆ, ಕೇವಲ ತಾನೊಬ್ಬನೇ (ಪರಮಾತ್ಮನೊಬ್ಬನೇ) ಉಪಾಯ ಎಂಬುದನ್ನು ತೋರಿಸಿದ್ದಾನೆ.)

**235. ಅವನ್ಯೈ ಇಪನ್ ಪತ್ತುಮ್ ಪತ್ತು ಅಹಂಕಾರ ಗರ್ಭಮ್ ಅವದ್ಯಕರಮ್.**

ಚೇತನನು 'ನಾನು ನನ್ನ ರಕ್ಷಣೆಗಾಗಿ ಅವನನ್ನು ಆಶ್ರಯಿಸುತ್ತೇನೆ' ಎಂದು ಸಾಧನ ಬುದ್ಧಿಯಿಂದ ಮಾಡುವ ಶರಣವರಣವು(ಶರಣಾಗತಿಯು)

ಅಹಂಕಾರದಿಂದ ಕೂಡಿದ್ದಾಗಿಯೂ ಅವಧ್ಯಕರವಾಗಿಯೂ ಇದೆ. (ಮಗ ನಾಹವನು ತನ್ನ ತಂದೆಯ ಹತ್ತಿರ 'ನಿನ್ನನ್ನು ನಾನು ರಕ್ಷಿಸುತ್ತೇನೆ' ಎಂದು ಪತ್ರ ಬರೆಸಿಕೊಂಡಂತೆ ಆಗುತ್ತದೆ.)

**236. ಅವನುಡೈಯ ಸ್ವೀಕಾರಮೇ ರಕ್ಷಕಮ್.**

ಪರಮಾತ್ಮನು ಈ ಚೇತನನನ್ನು ರಕ್ಷಿಸಬೇಕೆಂದು ಅಭಿಮಾನಿಸಿ ಸ್ವೀಕರಿಸುವುದೇ ರಕ್ಷಕವು.

**237. ಮತ್ತೈ ಉಪಾಯಂಗಳುಕ್ಕು ನಿವೃತ್ತಿದೋಷಮ್, ಇದುಕ್ಕು ಪ್ರವೃತ್ತಿದೋಷಮ್.**

ಇತರ ಸಾಧನೋಪಾಯಗಳಿಗೆ ಸ್ವಯತ್ನ ನಿವೃತ್ತಿಯು ದೋಷವಾಗುತ್ತದೆ (ಅಂದರೆ ಅವುಗಳನ್ನು ಮಾಡದೆ ಬಿಟ್ಟರೆ ದೋಷವಾಗುತ್ತದೆ); ಈ ಸಿದ್ಧೋಪಾಯಕ್ಕೆ (ಶರಣಾಗತಿಗೆ) ಸ್ವಯತ್ನ ಪ್ರವೃತ್ತಿ (ಅಂದರೆ ನಾನು ಆಚರಿಸುತ್ತೇನೆ ಎಂದು ಅಹಂಕಾರದೊಂದಿಗೆ ಆಚರಿಸಿದರೆ) ದೋಷವಾಗುತ್ತದೆ.

**238. "ಶಿತ್ತವೇಂಡಾ".**

"ಶಿತ್ತವೇಂಡಾ ಶಿಂದಿಪ್ಪೇ ಅಮೈಯುಂ"—ಎಂದು ತಿರುವಾಯ್ಮೊಳಿ (9–1–7) ಪಾಶುರದಲ್ಲಿ ತಿಳಿಸಿರುವಂತೆ ಶರಣಾಗತಿಗಾಗಿ ವಿಸ್ತಾರವಾದ ಯಾವ ವ್ಯಾಪಾರವನ್ನೂ ಮಾಡಬೇಕಾಗಿಲ್ಲ, ಅದಕ್ಕಾಗಿ ಕಳವಳಗೊಳ್ಳಬೇಕಾಗಿಲ್ಲ; ಅವನೇ ಉಪಾಯವೆಂದು ನೆನೆಸುವುದೇ ಸಾಕು ಎಂದು ಹೇಳಿದೆ.

**239. ನಿವೃತ್ತಿ ಕೀಳೇಶೊಲ್ಲಿತ್ತು.**

(ಈ ಪಾಶುರದಲ್ಲಿ ತಿಳಿಸಿರುವ ಸರ್ವವ್ಯಾಪಾರಗಳ) ನಿವೃತ್ತಿಯು ಹಿಂದೆಯೇ (ಈ ಶ್ಲೋಕದಲ್ಲಿಯೇ) 'ಸರ್ವಧರ್ಮಾನ್ ಪರಿತ್ಯಜ್ಯ' ಎಂದು ಹೇಳಿ ಆಗಿದೆ.

**240. ಉಪಕಾರಸ್ಮೃತಿಯುಮ್ ಚೈತನ್ಯಕಾರ್ಯಮಾಲೇ ವಂದದು; ಉಪಾಯತ್ತಿಲ್ ಅಂತರ್ಭವಿಯಾದು.**

(ಪರಮಾತ್ಮನ ಉಪಕಾರವನ್ನು ಸ್ಮರಿಸು ಎಂದು ಹೇಳಿರುವ) ಉಪಕಾರ

ಸ್ಮೃತಿಯು ಚೇತನನ ಚೈತನ್ಯ ಕಾರ್ಯದಿಂದ ಉಂಟಾದುದು; ಅದು ಉಪಾಯದಲ್ಲಿ ಸೇರುವುದಿಲ್ಲ. (ಅಂದರೆ ಚೇತನನ ಉಪಕಾರ ಸ್ಮೃತಿ ಯಿಂದ ಪರಮಾತ್ಮ ರಕ್ಷಣೆ ಮಾಡುತ್ತಾನೆ ಎಂಬ ಉಪಾಯಕ್ಕೆ ಸೇರುವುದಿಲ್ಲ.)

## 'ಶರಣಂ' ಎಂಬ ಪದದ ಅರ್ಥ

(ಸೂತ್ರಗಳು 241 ರಿಂದ 243)

**241.** **"ಶರಣವರ್."**

'ಶರಣಂ.'

**242.** **ಉಪಾಯಮಾಗ.**

ಉಪಾಯವಾಗಿ

**243.** **ಇಂದ ಶರಣಶಬ್ದಮ್ ರಕ್ಷಿಕಾನ್ನೈಯುಮ್ ಗೃಹತ್ತೈಯುಮ್, ಉಪಾಯತ್ತೈಯುಮ್ ಕಾಟ್ಟಕ್ಕಡವದೇಯಾಗಿಲುಮ್, ಇವ್ವಿಡತ್ತಿಲ್ ಉಪಾಯತ್ತೈಯೇ ಕಾಟ್ಟುಗಿರದು. ಕೀಳೋಡೇ ಶೇರವೇಂಡುಗೈಯಾಲೇ.**

ಈ ಶರಣ ಶಬ್ದವು ರಕ್ಷಕನನ್ನೂ, ಗೃಹವನ್ನೂ, ಉಪಾಯವನ್ನೂ ತೋರಿಸುವಂತಹುದಾಗಿದ್ದರೂ ಈ ಸ್ಥಳದಲ್ಲಿ ಉಪಾಯವನ್ನೇ ತಿಳಿ ಸುತ್ತದೆ. ಏಕೆಂದರೆ ಇದು ಸರ್ವಧರ್ಮಗಳನ್ನೂ ತ್ಯಜಿಸಿ ನನ್ನನ್ನು ಶರಣವಾಗಿವರಿಸು ಎಂದು ಹೇಳುವ ಹಿಂದಿನ ಪ್ರಕರಣದೊಂದಿಗೆ ಹೊಂದಿ ಕೊಳ್ಳಬೇಕಾಗಿದೆ.

## 'ವ್ರಜ' ಎಂಬ ಪದದ ಅರ್ಥ
## (ಸೂತ್ರಗಳು 244 ರಿಂದ 248)

**244.** **"ವ್ರಜ."**

ಸ್ವೀಕರಿಸು,

**245.** **ಬುದ್ಧಿ ಪಣ್ಣು.**

ಬುದ್ಧಿ ಮಾಡು.

**246.** **ಗತ್ಯರ್ಥಮಾವದು ಬುದ್ಧ್ಯರ್ಥಮಾಯ್ ಅಧ್ಯವಸಿ ಎನ್ರಪಡಿ.**

ಗತ್ಯರ್ಥವಾಗಿ ಅಂದರೆ ಬುದ್ಧ್ಯರ್ಥವಾಗಿ ಅಧ್ಯವಸಿಸುವವನಾಗು (ಅಂದರೆ ನನ್ನನ್ನೇ ಉಪಾಯವಾಗಿ ಹೃದಯದಲ್ಲಿ ನೆನೆಸುವವನಾಗು)—ಎಂದು ಅರ್ಥ.)

(ವ್ರಜ ಎಂಬುದಕ್ಕೆ ವ್ರಜಗತೌ ಎಂಬುದು ಧಾತು—ಅದಕ್ಕೆ ಗತಿ ಎಂದು ಅರ್ಥ. ಗತ್ಯರ್ಥವೆಂದರೆ ಬುದ್ಧ್ಯರ್ಥವೆಂದು ಅರ್ಥ.)

**247.** **ವಾಚಿಕ ಕಾಯಿಕಂಗಳುಮ್ ಇದುಕ್ಕು ಅಪೇಕ್ಷಿತಂಗಳಾಯ್ ಇರುಕ್ಕಚ್ಚೆಯ್‌ದೇಯುಮ್ ಜ್ಞಾನಾನ್ಮೋಕ್ಷ ಮಾಗೈಯಾಲೇ ಮಾನಸಮಾನ ಅನುಷ್ಠಾನತ್ತೈ ಚೊಲ್ಲುಗಿರದು.**

ವಾಚಿಕ ಕಾಯಿಕ ಅನುಷ್ಠಾನಗಳು (ಅಂದರೆ ಶರಣಾಗತಿ ಮಾಡುತ್ತೇನೆ ಎಂದು ಬಾಯಿಂದ ಹೇಳುವ ಮತ್ತು ನಮಸ್ಕಾರಾದಿಗಳನ್ನು ಶರೀರದ ಮೂಲಕ ಮಾಡುವ ಅನುಷ್ಠಾನಗಳು) ಈ ಉಪಾಯ ಸ್ವೀಕಾರಕ್ಕೆ (ಶರಣಾಗತಿಗೆ) ಬೇಕಾಗಿದ್ದಾಗ್ಯೂ ಜ್ಞಾನದಿಂದ ಮೋಕ್ಷವೆಂದು ಶಾಸ್ತ್ರದಲ್ಲಿ ಹೇಳಿರುವುದರಿಂದ ಇಲ್ಲಿ ಹೃದಯದಲ್ಲಿ ನೆನೆಯುವ ಮಾನಸಅನುಷ್ಠಾನ ಮಾತ್ರವನ್ನೇ ಹೇಳಿದೆ.

**248.** **ಆಗ, ತ್ಯಾಜ್ಯತ್ತೈಚ್ಚೊಲ್ಲಿ, ತ್ಯಾಗಪ್ರಕಾರತ್ತೈಚ್ಚೊಲ್ಲಿ ಪತ್ತ-ಪ್ಪಡುಮುಪಾಯತ್ತೈ ಚ್ಚೊಲ್ಲಿ, ಉಪಾಯನೈರಪೇಕ್ಷ್ಯಮ್**

**ಶೊಲ್ಲಿ, ಉಪಾಯತ್ವಮ್ ಶೊಲ್ಲಿ, ಉಪಾಯ ಸ್ವೀಕಾರಮ್ ಶೊಲ್ಲುಗಿರದು.**

ಆದ್ದರಿಂದ ಈ ಮೊದಲನೆಯ ವಾಕ್ಯದಲ್ಲಿ ತಿಳಿಸಿರುವುದೇನೆಂದರೆ—

**ಸರ್ವಧರ್ಮಾನ್**—ಸರ್ವ ಧರ್ಮಗಳನ್ನೂ ಎಂದು ತ್ಯಾಜ್ಯವಾದುದನ್ನು ತಿಳಿಸಿ;

**ಪರಿತ್ಯಜ್ಯ**—ಪರಿತ್ಯಜಿಸಿ ಎಂದು ತ್ಯಾಗ ಪ್ರಕಾರವನ್ನು ತಿಳಿಸಿ;

**ಮಾಂ**—ನನ್ನನ್ನು ಎಂದು ಶರಣು ಹೊಂದಬೇಕಾದ ಉಪಾಯವನ್ನು ಹೇಳಿ;

**ಏಕಂ**—ನನ್ನೊಬ್ಬನನ್ನೇ ಎಂದು ಉಪಾಯದ ನಿರಪೇಕ್ಷತೆಯನ್ನು ಹೇಳಿ;

**ಶರಣಂ**—ಉಪಾಯವಾಗಿ ಎಂದು ಉಪಾಯತ್ವವನ್ನು ಹೇಳಿ;

**ವ್ರಜ**—ಸ್ವೀಕರಿಸು ಎಂದು ಉಪಾಯಸ್ವೀಕಾರವು ಹೇಳಲ್ಪಟ್ಟಿದೆ.

[ಸರ್ವಧರ್ಮಾನ್ ಪರಿತ್ಯಜ್ಯ ಮಾಂ ಏಕಂ ಶರಣಂ ವ್ರಜ ಎಂದರೆ ಸರ್ವ ಧರ್ಮಗಳನ್ನೂ ಪರಿತ್ಯಜಿಸಿ ನನ್ನೊಬ್ಬನನ್ನೇ ಉಪಾಯವಾಗಿ ಸ್ವೀಕರಿಸು (ಅಂದರೆ ನನ್ನೊಬ್ಬನಲ್ಲೇ ಶರಣಾಗತಿ ಮಾಡು) ಎಂದು ಅರ್ಥ.]

## ಅಹಂ ತ್ವಾ ಸರ್ವ ಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ।

## ಎಂಬ ಎರಡನೆಯ ವಾಕ್ಯದ ಅರ್ಥ

## ಅಹಂ ಎಂಬ ಪದದ ಅರ್ಥ

## (ಸೂತ್ರಗಳು 249 ರಿಂದ 254)

**249. "ಅಹಮ್."**

'ಅಹಂ'—ನಾನು.

**250. ಸ್ವಕೃತ್ಯತ್ತೈ ಅರುಳಿಚ್ಚೈಗಿರಾನ್.**

ಪರಮಾತ್ಮನಾದ ತನ್ನ ಕಾರ್ಯವನ್ನು ತಿಳಿಸುತ್ತಾನೆ. (ಹಿಂದಿನ ವಾಕ್ಯದಲ್ಲಿ ಚೇತನನು ಮಾಡಬೇಕಾದ ಕಾರ್ಯವನ್ನು ತಿಳಿಸಿದನು.)

**251. ಸರ್ವಜ್ಞನಾಯ್ ಸರ್ವಶಕ್ತಿಯನಾಯ್ ಪ್ರಾಪ್ತನಾನ ನಾನ್.**

ಸರ್ವಜ್ಞನಾದ, ಸರ್ವಶಕ್ತನಾದ, ಪ್ರಾಪ್ತನಾದ ನಾನು—

**252. ಇವನ್ ಕೀೞ್ ನಿನ್ರ ನಿಲೈಯುಮ್ ಮೇಲ್ ಪೋಕ್ಕಡಿಯುಮ್ ಅರಿಗೈಕ್ಕುಮ್ ಅರಿಂದಪಡಿಯೇ ಶೆಯ್ದು ತಲೈಕಟ್ಟುಗೈಕ್ಕುಮ್ ಏಕಾಂತಮಾನ ಗುಣವಿಶೇಷಂಗಳೈಯುಮ್ ತನ್ ಪೇರಾಗ-ಚ್ಚೆಯ್ದು ತಲೈಕ್ಕಟ್ಟುಗೈಕ್ಕೀಡಾನ ಬಂಧವಿಶೇಷತ್ತೈಯುಮ್ ಕಾಟ್ಟುಗಿರದು.**

(ಪರಮಾತ್ಮನಿಗೆ ಅನೇಕ ಗುಣಗಳಿರುವಾಗ ಕೇವಲ ಈ ಮೂರು ಗುಣಗಳನ್ನು ಮಾತ್ರ ತಿಳಿಸಿರುವುದೇತಕ್ಕೆ ಎಂಬುದನ್ನು ಇಲ್ಲಿ ತಿಳಿಸಿದ್ದಾರೆ.)
ಈ ಚೇತನನಿಗೆ ಇಷ್ಟ ಪ್ರಾಪ್ತಿಯನ್ನೂ ಅನಿಷ್ಟ ನಿವೃತ್ತಿಯನ್ನೂ ಮಾಡಿ ಅವನನ್ನು ರಕ್ಷಿಸುವಾಗ, ಅವನ ಹಿಂದಿನ ಸ್ಥಿತಿಗತಿಗಳನ್ನೂ ಅವನು ಮುಂದೆ ಅನುಸರಿಸಬೇಕಾದ ಮಾರ್ಗವನ್ನೂ ಅರಿಯಲು ಮತ್ತು ಅರಿತ ಮೇಲೆ ಅದನ್ನು ಪೂರ್ತಿಗೊಳಿಸಲು ಅತ್ಯಾವಶ್ಯಕಗಳಾಗಿರುವ ಸರ್ವಜ್ಞತ್ವ ಸರ್ವಶಕ್ತಿತ್ವಾದಿಗುಣಗಳನ್ನೂ, ಚೇತನನ ರಕ್ಷಣಾಕಾರ್ಯವು ಕೇವಲ ಚೇತನನಿಗಾಗಿ ಅಲ್ಲದೆ ತನ್ನ ವಸ್ತುವಾದ ಅವನ ರಕ್ಷಣೆಯು ತನಗಾಗಿ ಆಗಿರುದರಿಂದ, ಅದಕ್ಕೆ ಅವಶ್ಯಕವಾದ ಪರಮಾತ್ಮನ ಶೇಷಿತ್ವವನ್ನೂ—ಈ ಮೂರು ಗುಣಗಳನ್ನೂ 'ಅಹಂ' ಎಂಬ ಪದವು ಪ್ರಕಾಶಪಡಿಸುತ್ತದೆ. [ಮೊದಲನೆಯ ವಾಕ್ಯದಲ್ಲಿರುವ 'ಮಾಂ' ಎಂಬುದು ಚೇತನನ ಆಶ್ರಯಣಕ್ಕೆ ಬೇಕಾದ ಪರಮಾತ್ಮನ ವಾತ್ಸಲ್ಯಾದಿ ಗುಣಗಳನ್ನು ಪ್ರಕಾಶಪಡಿಸಿದಂತೆ ಇಲ್ಲಿ 'ಅಹಂ' ಎಂಬುದು ಚೇತನನ ರಕ್ಷಣಾಕಾರ್ಯಕ್ಕೆ ಬೇಕಾದ ಪರಮಾತ್ಮನ ಜ್ಞಾನಶಕ್ತ್ಯಾದಿಗುಣವಿಶೇಷಗಳನ್ನು ತಿಳಿಸುತ್ತದೆ.]

**253. ತನಕ್ಕಾಗಕ್ಕೊಂಡ ಸಾರಥ್ಯವೇಷತ್ತೈ ಅವನೈಯಿಟ್ಟುಪ್ಪಾರಾದೇ ತನ್ನೈಯಿಟ್ಟುಪ್ಪಾರ್ತ್ತು ಅಂಜಿನ ಅಚ್ಚಮ್ ತೀರ, ತಾನಾನ ತನ್ನೈಯೈ ಅಹಮ್ ಎನ್ರು ಕಾಟ್ಟುಗಿರಾನ್.**

ಪರಮಾತ್ಮನು ಅರ್ಜುನನನ್ನು ರಕ್ಷಿಸುವುದಕ್ಕಾಗಿ ಧರಿಸಿಕೊಂಡ ರಥದ ಸಾರಥಿಯ ರೂಪವನ್ನು, ಪರಮಾತ್ಮನ ವಾತ್ಸಲ್ಯಾದಿ ಗುಣಗಳಿಂದ ಉಂಟಾದುದೆಂದು ಪರಿಗಣಿಸದೆ, ತನಗೆ ಇವನು ಕೇವಲ ಸಾರಥಿ ಎಂದು ಭಾವಿಸಿ (ಇವನು ಹೇಳುವಂತೆ ಎಲ್ಲವನ್ನೂ ಬಿಟ್ಟು ಇವನನ್ನು ಮರೆಹೊಕ್ಕರೆ) ಇವನು ತನ್ನನ್ನು ರಕ್ಷಿಸಬಲ್ಲನೇ ಎಂಬ ಅರ್ಜುನನ ಭಯವು

ನಾಶವಾಗುವಂತೆ (ಸರ್ವಜ್ಞತ್ವ, ಸರ್ವಶಕ್ತಿತ್ವಾದಿ ಗುಣಗಳಿಂದ ಕೂಡಿ ನಿರಂಕುಶ ಸ್ವತಂತ್ರನಾಗಿರುವ) ತನ್ನ ಯಥಾರ್ಥ ರೂಪವನ್ನು—'ಅಹಂ' ಎಂದು ಹೇಳಿ ತೋರಿಸುತ್ತಾನೆ.

**254. ಕೀಳಿಲ್ ಪಾರತಂತ್ರ್ಯಮುಮ್ ಇಂಥ ಸ್ವಾತಂತ್ರ್ಯತ್ತಿನುಡೈಯ ಎಲ್ಲೈ ನಿಲಮಿರೇ.**

ಹಿಂದೆ ಸಾರಥಿ ರೂಪದಲ್ಲಿ ತೋರಿಸಿರುವ ಪಾರತಂತ್ರ್ಯವೂ, ಈ ನಿರಂಕುಶ ಸ್ವಾತಂತ್ರ್ಯದ ಸೀಮಾಭೂಮಿಯಾಗಿದೆ. (ಅಂದರೆ ಇವನು ಸಾರಥಿ ರೂಪಧರಿಸಿ ಪರತಂತ್ರನಾಗಿದ್ದುದೂ, ತಾನು ನೆನೆಸಿದ್ದನ್ನು ಮಾಡು ವಾಗ ತನ್ನನ್ನು ಯಾರೂ ತಡೆಯುವವರಿಲ್ಲದ ಇವನ ಸ್ವಾತಂತ್ರ್ಯದ ಕಾರ್ಯವೇ ಆಗಿದೆ.)

## 'ತ್ವಾ' ಎಂಬ ಪದದ ಅರ್ಥ
## (ಸೂತ್ರಗಳು 255 ರಿಂದ 256)

**255. 'ತ್ವಾ.'**

ತ್ವಾ—(ನಿನ್ನನ್ನು)

**256. ಅಜ್ಞನಾಯ್ ಅಶಕ್ತನಾಯ್ ಅಪ್ರಾಪ್ತನಾಯ್ ಎನ್ನೈಯೇ ಉಪಾಯಮಾಗಪ್ಪತ್ತಿಯಿರುಕ್ಕಿರ ಉನ್ನೈ.**

ಅಜ್ಞನಾಗಿಯೂ (ಅಂದರೆ ನಿನ್ನ ಕೆಲಸಗಳನ್ನು ಅರಿಯಲು ಬೇಕಾದ ಪೂರ್ಣಜ್ಞಾನವಿಲ್ಲದವನಾಗಿಯೂ) ಅಶಕ್ತನಾಗಿಯೂ (ಅಂದರೆ ಅರಿತರೂ ಅದನ್ನು ಮಾಡಿ ಪೂರ್ತಿಗೊಳಿಸುವ ಶಕ್ತಿ ಇಲ್ಲದವನಾಗಿಯೂ) ಅಪ್ರಾಪ್ತನಾಗಿಯೂ (ಅಂದರೆ ಶಕ್ತಿ ಇದ್ದರೂ ನಿನ್ನ ರಕ್ಷಣಾ ಕಾರ್ಯ ದಲ್ಲಿ ನಿನಗೆ ಪ್ರಾಪ್ತಿ ಇಲ್ಲದವನಾಗಿಯೂ) ಇರುವುದರಿಂದ (ಸರ್ವಧರ್ಮ ಗಳನ್ನೂ ಪರಿತ್ಯಜಿಸಿ) ನನ್ನನ್ನೇ ಉಪಾಯವಾಗಿ ಪರಿಗ್ರಹಿಸಿರುವ ನಿನ್ನನ್ನು—

## 'ಸರ್ವಪಾಪೇಭ್ಯಃ' ಎಂಬ ಪದದ ಅರ್ಥ
## (ಸೂತ್ರಗಳು 257 ರಿಂದ 262)

**257.** **'ಸರ್ವಪಾಪೇಭ್ಯಃ'**

ಎಲ್ಲಾ ಪಾಪಗಳಿಂದಲೂ

**258.** **ಮತ್ಪ್ರಾಪ್ತಿಪ್ರತಿಬಂಧಕಂಗಳೆನ್ರು ಯಾವ್ವೈ ಯಾವ್ವೈ ಶಿಲಪಾಪಂ-ಗಳೈಕ್ಕುರಿತ್ತು ಅಂಜುಗಿರಾಯ್ ಅವ್ವೋಪಾಪಂಗಳೆಲ್ಲಾವತ್ತಿಲ್ ನಿನ್ರುಮ್.**

ನನ್ನ ಪ್ರಾಪ್ತಿಗೆ ಪ್ರತಿಬಂಧಕಗಳೆಂದು ಯಾವ ಯಾವ ಕೆಲವು ಪಾಪಗಳನ್ನು ಕುರಿತು ನೀನು ಅಂಜುತ್ತಿದ್ದೀಯೋ ಆ ಎಲ್ಲಾ ಪಾಪಗಳನ್ನೂ

**259.** **"ಪೊಯ್‌ನ್ನಿನ್ರ ಜ್ಞಾನಮುಮ್ ಪೊಲ್ಲಾವೊಳುಕ್ಕುಮ್ ಅಳು-ಕ್ಕುಡಂಬುಮ್" ಎನ್ಗಿರಪಡಿಯೇ ಅವಿದ್ಯಾಕರ್ಮ ವಾಸನಾರುಚಿ-ಪ್ರಕೃತಿ ಸಂಬಂಧಂಗಳೈ ಚೊಲ್ಲುಗಿರದು.**

ಪಾಪೇಭ್ಯಃ ಎಂದು ಹೇಳಿರುವ ಬಹುವಚನವು–"ಪೊಯ್‌ನ್ನಿನ್ರ ಜ್ಞಾನ-ಮುಂ, ಪೊಲ್ಲಾವೊಳುಕ್ಕುಂ ಅಳುಕ್ಕುಡಂಬುಂ"—ಅಂದರೆ ಅಚೇತನವಾದ ದೇಹದ ವಿಷಯದಲ್ಲಿ ಆತ್ಮವೆಂಬ ಜ್ಞಾನವೂ, ದೇಹಾತ್ಮಾಭಿಮಾನದಿಂದ ಉಂಟಾಗುವ ದುಷ್ಕರ್ಮ ಪ್ರವೃತ್ತಿಯೂ, ಅದರಿಂದ ಪ್ರಾಪ್ತವಾಗುವ ದೇಹಸಂಬಂಧವೂ—ಎಂದು ಶ್ರೀ ನಮ್ಮಾಳ್ವಾರ್ ತಿರುವಿರುತ್ತದ 1ನೆಯ ಪಾಶುರದಲ್ಲಿ ತಿಳಿಸಿರುವಂತೆ–ಅವಿದ್ಯಾಕರ್ಮವಾಸನಾರುಚಿಪ್ರಕೃತಿ ಸಂಬಂಧ ಗಳೆಲ್ಲವನ್ನೂ ತಿಳಿಸುತ್ತದೆ.

**260.** **ತೃಣಚ್ಛೇದ ಜಪಾಧ್ಯಯನಾದಿಗಳೈಪ್ಪೋಲೇ ಪ್ರಕೃತಿವಾಸನೈ-ಯಾಲೇ ಅನುವರ್ತಿಕ್ಕುಮ್ ಅವೈಯೆನ್ನ, ಲೋಕಾಪವಾದ ಭೀತಿಯಾಲುಮ್ ಕರುಣೈಯಾಲುಮ್ ಕಲಕ್ಕತ್ತಾಲುಮ್ ಶೆಯ್ಯುಮ್ ಅವೈಯೆನ್ನ ಇವೈ ಎಲ್ಲಾವತ್ತೈಯುಂ ನಿನೈಕ್ಕಿರದು.**

ಸರ್ವ ಎಂಬುದರಿಂದ ತಿಳಿಸಿರುವುದೇನೆಂದರೆ—

ಹುಲ್ಲು ಕೀಳುವುದು, ನೆವೆ ಕಡಿತ ಮೊದಲಾದವುಗಳ ಹಾಗೆ ಅಬುದ್ಧಿ ಪೂರ್ವಕವಾಗಿ, ಪ್ರಕೃತಿ ವಾಸನೆಯಿಂದ ಅನುವರ್ತಿಸುವ ಕಾರ್ಯಗಳೇನು; ಲೋಕಾಪವಾದ ಭೀತಿಯಿಂದಲೂ, ಕರುಣೆಯಿಂದಲೂ, ರಜಸ್ತಮೋ ಗುಣಗಳಿಂದ ಉಂಟಾದ ಕಳವಳದಿಂದಲೂ, ಮಾಡುವ ಪಾಪಗಳೇನು ಇವೆಲ್ಲವನ್ನೂ ತಿಳಿಸುತ್ತದೆ.

**261. ಉನ್ಮತ್ತಪ್ರವೃತ್ತಿಕ್ಕು ಗ್ರಾಮಪ್ರಾಪ್ತಿಪೋಲೆ ತ್ಯಜಿತ್ತ ಉಪಾಯಂ ಗಳಿಲೇ ಇವ್ವೈ ಅನ್ವಿತಂಗಳಾನೋವೆನ್ರು ನಿನೈಕ್ಕವೇಂಡಾ.**

ಚಿತ್ತಭ್ರಮಣೆ ಹೊಂದಿರುವವನು ಎಲ್ಲಿಗೆ ಹೋಗಬೇಕೆಂಬ ಗುರಿಯಿಲ್ಲದೆ ಯಾವುದೋ ಒಂದು ದಾರಿ ಹಿಡಿದು ಹೋದರೂ, ಆ ದಾರಿಯಲ್ಲೂ ಯಾವುದೋ ಒಂದು ಊರನ್ನು ಹೋಗಿ ಸೇರುವಂತೆ ಸಾಧನವೆಂಬ ಭಾವನೆ ಹೊಂದದೆ ಇದ್ದರೂ ಲೋಕಾಪವಾದ ಭೀತಿ ಮುಂತಾದ ಕಾರಣ ಗಳಿಗಾಗಿ ಆಚರಿಸಲ್ಪಡುವ ಮೇಲೆ ತಿಳಿಸಿರುವ ಈ ಕರ್ಮಗಳೂ ತ್ಯಜಿಸ ಬೇಕಾಗಿರುವ ಧರ್ಮಗಳಲ್ಲಿ ಸೇರುತ್ತವೆಯೋ ಎಂಬ ಶಂಕೆಗೆ ಆಸ್ಪದವಿಲ್ಲ. (ಅಂದರೆ ಇವುಗಳೂ ಬಿಡತಕ್ಕವುಗಳಾಗಿಯೇ ಇವೆ ಎಂದು ಅರ್ಥ ಆದ್ದರಿಂದ ಅವುಗಳೆಲ್ಲವೂ ಪಾಪಶಬ್ದದಲ್ಲಿ ಹೇಳಲ್ಪಟ್ಟವುಗಳಾಗಿವೆ.)

**262. ಕಲಂಗಿ ಉಪಾಯಬುದ್ಧ್ಯಾ ಪಣ್ಣುಮ್ ಪ್ರಪತ್ತಿಯುಮ್ ಪಾತಕತ್ತೋಡೊಕ್ಕುಮ್.**

ಕಳವಳಗೊಂಡು ಇಷ್ಟ ಪ್ರಾಪ್ತಿಗೂ ಅನಿಷ್ಟ ನಿವೃತ್ತಿಗೂ ಇದು ಉಪಾಯವೆಂಬ ಬುದ್ಧಿಯಿಂದ ಕೂಡಿ ಮಾಡುವ ಪ್ರಪತ್ತಿಯೂ ಕೂಡ ಪಾಪ ಕಾರ್ಯಗಳಿಗೆ ಸಮವು.

▼

# 'ಮೋಕ್ಷಯಿಷ್ಯಾಮಿ' ಎಂಬ ಪದದ ಅರ್ಥ
# (ಸೂತ್ರಗಳು 263 ರಿಂದ 268)

**263. 'ಮೋಕ್ಷಯಿಷ್ಯಾಮಿ.'**

**264. ಮುಕ್ತನಾಂಬಡಿ ಪಣ್ಣಕ್ಕಡವೇನ್.**

"ಮೋಕ್ಷಯಿಷ್ಯಾಮಿ"—ಮುಕ್ತನಾಗುವಂತೆ ಮಾಡುತ್ತೇನೆ.

**265. ಣಿಚ್ಚಾಲೇ ನಾನುಮ್ ವೇಂಡಾ ನೀಯುಮ್ ವೇಂಡಾ; ಅವ್ವೈ ತನ್ನಡೈಯೇ ವಿಟ್ಟುಪ್ಪೋಮ್ ಕಾಣ್ ಎನ್ಗಿರಾನ್.**

'ಮೋಕ್ಷಯಿಷ್ಯಾಮಿ'ಎಂಬ ಪದದಲ್ಲಿರುವ 'ಯಿಷ್ಯಾಮಿ'ಎಂಬ ಣಿಚ್ಚಿನಿಂದ ನಾನು ಇದಕ್ಕೆ ಒಂದು ಯತ್ನವನ್ನೂ ಮಾಡಬೇಕಾಗಿಲ್ಲ, ನೀನು ಇದಕ್ಕಾಗಿ ಪ್ರಾರ್ಥಿಸಬೇಕಾಗಿಲ್ಲ. (ನೀನು ನನ್ನನ್ನು ಆಶ್ರಯಿಸಿದ ಮಹಾತ್ಮೆಯಿಂದ) ಅವುಗಳು (ಪಾಪಗಳು) ತಾವಾಗಿಯೇ ಬಿಟ್ಟು ಹೋಗುತ್ತವೆ ನೋಡು ಎಂದು ಹೇಳುತ್ತಾನೆ.

**266. ಎನ್ನುಡೈಯ ನಿಗ್ರಹಫಲಮಾಯ್ ವಂದವೈ ನಾನಿರಂಗಿನಾಲ್ ಕಿಡಕ್ಕುಮೋವೆನ್ಗೈ.**

ನನ್ನ (ಪರಮಾತ್ಮನ) ನಿಗ್ರಹದ ಫಲವಾಗಿ ಬಂದ ಈ ಪಾಪಗಳ ಫಲಾನುಭವವು ನಾನು (ಪರಮಾತ್ಮನು) ಕೃಪೆ ತೋರಿಸಿದ ಮೇಲೆ ಅವು ಉಂಟಾಗಬಲ್ಲವೋ? (ಅಂದರೆ ಭಗವದನುಗ್ರಹಲಭಿಸಿದ ಮೇಲೆ ಅವು ತಾವಾಗಿಯೇ ನಾಶವಾಗುತ್ತವೆ ಎಂದು ಅರ್ಥ.)

**267. ಅನಾದಿಕಾಲಮ್ ಪಾಪಂಗಳೈಕ್ಕೊಂಡು ನೀಪಟ್ಟಪಾಟ್ಟೈ ಅವ್ವೈ-ತಾನ್ ಪಡುಂಬಡಿ ಪಣ್ಣುಗಿರೇನ್.**

ಅನಾದಿಕಾಲ ನೀನು ಈ ಪಾಪಗಳ ಫಲವಾಗಿ ಅನುಭವಿಸಿದ ತೊಂದರೆಗಳನ್ನೆಲ್ಲಾ ಆ ಪಾಪಗಳೇ ಅನುಭವಿಸುವಂತೆ ಮಾಡುತ್ತೇನೆ.

**268. ಇನಿ ಉನ್ ಕೈಯಿಲುವನ್ ಉನ್ನೈಕ್ಕಾಟ್ಟಿತ್ತಾರೇನ್; ಎನ್ನು-ಡಂಬಿಲ್ ಅಳುಕ್ಕೈ ನಾನೇ ಪೋಕ್ಕಿಕ್ಕೊಳ್ಳೇನೋ?**

ಇನ್ನು ಮುಂದೆ (ಅಂದರೆ ನನಗೆ ಶರೀರವಾಗಿ ನನಗೆ ಶೇಷಭೂತನಾಗಿರುವ ನೀನು, ನನ್ನಲ್ಲಿ ಶರಣಾಗತಿ ಮಾಡಿದಮೇಲೆ) ನಿನ್ನ ಪಾಪಗಳನ್ನು ನೀನು ಹೋಗಲಾಡಿಸಿಕೊ ಎಂದು ನಿನ್ನ ಕೈಯ್ಯಲ್ಲಿ ನಿನ್ನನ್ನು ಬಿಟ್ಟುಕೊಡುವು ದಿಲ್ಲ; ನನ್ನ ಶರೀರದ ಕೊಳೆಯನ್ನು ನಾನು ಹೋಗಲಾಡಿಸಿಕೊಳ್ಳದಿರು ವೆನೋ! (ಅಂದರೆ ನನಗೆ ಶರೀರವಾದ ನಿನ್ನ ಅವಿದ್ಯಾದಿ ಕೊಳೆಗಳನ್ನು ಶರೀರಿಯಾದ ನಾನೇ ಹೋಗಲಾಡಿಸಿಕೊಳ್ಳುತ್ತೇನೆ ಎಂದು ಅರ್ಥ.)

## ಮಾಶುಚಃ ಎಂಬ ಪದದ ಅರ್ಥ

(ಸೂತ್ರಗಳು 269 ರಿಂದ 273)

**269. 'ಮಾಶುಚಃ.'**

ಮಾ ಶುಚಃ—(ನೀನು ದುಃಖಿಸಬೇಡ).

**270. ನೀ ಉನ್‌ಕಾರ್ಯತ್ತಿಲೇ ಅಧಿಕರಿಯಾವೈಯಾಲುಮ್ ನಾನ್ ಉನ್ ಕಾರ್ಯತ್ತಿಲೇ ಅಧಿಕರಿತ್ತುಕ್ಕೊಂಡು ಪೋರುಗೈಯಾ-ಲುಮ್ ಉನಕ್ಕು ಶೋಕನಿಮಿತ್ತಮಿಲ್ಲೈ ಕಾಣೆನ್ರು ಅವನು-ಡೈಯ ಶೋಕನಿವೃತ್ತಿಯೈ ಪ್ಪಣ್ಣಿಕ್ಕೊಡುಕ್ಕಿರಾನ್.**

ನಿನ್ನ ಶೇಷತ್ವ (ದಾಸತ್ವ) ಸ್ವರೂಪಾನುಗುಣವಾಗಿ ನೀನು ನಿನ್ನ ರಕ್ಷಣೆ ಮಾಡಿಕೊಳ್ಳಲು ಅಧಿಕಾರಿಯಾಗಿಲ್ಲದಿರುವುದರಿಂದಲೂ (ಇದು ಈ ಶ್ಲೋಕದಲ್ಲಿರುವ 'ತ್ವಾ' ಎಂಬುದರಿಂದ ತಿಳಿಸಲ್ಪಟ್ಟಿದೆ); ನಿನಗೆ ಶೇಷಿ ಯಾದ (ಸ್ವಾಮಿಯಾದ) ನಾನು ಅತ್ಯಂತ ಆಸಕ್ತಿಯಿಂದ ನಿನ್ನ ರಕ್ಷಣಾ ಕಾರ್ಯದಲ್ಲಿ ನಿರತನಾಗಿರುವುದರಿಂದಲೂ (ಇದು 'ಅಹಂ' ಎಂಬುದರಿಂದ ತಿಳಿಸಲ್ಪಟ್ಟಿದೆ)—ನೀನು ದುಃಖಿಸಲು ಕಾರಣವಿಲ್ಲವೆಂದು ಹೇಳಿ ಅವನ ಶೋಕವನ್ನು ಹೋಗಲಾಡಿಸುತ್ತಾನೆ.

271. ನಿವರ್ತಕ ಸ್ವರೂಪತ್ತೈಚ್ಚೊಲ್ಲಿ ನಿವರ್ತ್ಯಂಗಳ್ ಉನ್ನೈವಂದು ಮೇಲಿಡಾದೆನ್ರುಶೊಲ್ಲಿ, ಉನಕ್ಕು ಶೋಕನಿಮಿತ್ತಮಿಲ್ಲೈಕಾಣ್ ಎನ್ಗಿರಾನ್.

ಪಾಪಗಳನ್ನು ಹೋಗಲಾಡಿಸುವವನಾದ ಪರಮಾತ್ಮನ ಸ್ವರೂಪವನ್ನು ತಿಳಿಸಿ (ಅಂದರೆ ನಿನ್ನ ರಕ್ಷಣೆಗೆ ಅಡ್ಡಿಯಾಗಿರುವ, ನಿನ್ನ ಪಾಪಗಳನ್ನು ಹೋಗಲಾಡಿಸಿ ರಕ್ಷಿಸುವವನಾಗಿರುವ ಪರಮಾತ್ಮನಾದ ತನ್ನ ಸರ್ವಜ್ಞತ್ವ ಸರ್ವಶಕ್ತಿತ್ವಾದಿಗಳಿಂದ ಕೂಡಿರುವ ಸ್ವರೂಪವನ್ನು 'ಅಹಂ' ಎಂಬುದ ರಿಂದ ತಿಳಿಸಿ) ಹೋಗಲಾಡಿಸಬೇಕಾದ ಪಾಪಗಳು, ನಿನ್ನ ಬಳಿ ಬರಲಾರ ವೆಂಬುದನ್ನು ತಿಳಿಸಿ (ಅಂದರೆ ಹೋಗಲಾಡಿಸಬೇಕಾಗಿರುವ ನಿನ್ನ ಅನಾದಿ ಪಾಪಗಳೂ ನನ್ನಲ್ಲಿ ಶರಣಾಗತನಾಗಿರುವ ನಿನ್ನನ್ನು ಕಂಡು ಅಂಜಿ ತಾವೇ ಬಿಟ್ಟು ಹೋಗಿಬಿಡುತ್ತೇವೆಯೇ ವಿನಃ ನಿನ್ನ ಬಳಿ ಬರಲಾರವು ಎಂದು ಸರ್ವ ಪಾಪೇಭ್ಯಃ ಮೋಕ್ಷಯಿಷ್ಯಾಮಿ ಎಂಬುದರಿಂದ ತಿಳಿಸಿ)—ಈ ಕಾರಣಗಳಿಂದ 'ಮಾಶುಚಃ'—ಅಂದರೆ ನೀನು ದುಃಖಿಸಲು ಕಾರಣವಿಲ್ಲ ಎಂದು ಹೇಳುತ್ತಾನೆ.

272. "ಎತ್ತಿನಾಲಿಡರ್‌ಕ್ಕಡಲ್ ಕಿಡತ್ತಿ ಏಳೈನೆಂಜಮೇ" ಎನ್ಗಿರಾನ್.

"ಎತ್ತಿನಾಲಿಡರ್‌ಕ್ಕಡಲ್ ಕಿಡತ್ತಿ ಏಳೈನೆಂಜಮೇ"—ಅಂದರೆ ಸರ್ವೇ-ಶ್ವರನು ನಮ್ಮ ಪಾಪಾದಿವಿರೋಧಿಗಳನ್ನೆಲ್ಲಾ ಹೋಗಲಾಡಿಸಿ ನಮ್ಮನ್ನು ರಕ್ಷಿಸಬೇಕೆಂದು ಬಂದು ಅಂತರ್ಯಾಮಿಯಾಗಿ ಒಳಹೊಕ್ಕಿರುವಾಗ ನೀನು ಏತಕ್ಕಾಗಿ ದುಃಖಸಾಗರದಲ್ಲಿ ಮುಳುಗಿದ್ದೀಯೆ—ಎಂದು ತಿರುಮಳಿಶೈ ಆಳ್ವಾರ್ರು ತಿರುಚ್ಛಂದವಿರುತ್ತ (115) ಪಾಶುರದಲ್ಲಿ ತಮ್ಮ ಮನಸ್ಸನ್ನು ಕುರಿತು ಹೇಳಿರುವಂತೆ—ಶ್ರೀಕೃಷ್ಣನೂ ಅರ್ಜುನನಿಗೆ (ನಿನ್ನ ಪಾಪಗಳನ್ನು ಹೋಗಲಾಡಿಸಿ ರಕ್ಷಿಸಲು ನಾನು ನಿನ್ನ ಬಳಿ ಇರುವಾಗ—'ಮಾಶುಚಃ'—ದುಃಖಿಸಬೇಡ ಎಂದು) ಹೇಳಿದ್ದಾನೆ.

273. ಪಾಪಂಗಳೈ ನಾನ್ ಪೊರುತ್ತು ಪುಣ್ಯಮೆನ್ರು ನಿನೈಪ್ಪಿಡಾನಿರ್ಕ ನೀ ಶೋಕಿಕ್ಕ ಕ್ಕಡವೈಯೊ?

ನೀನು ಮಾಡಿರುವ ಪಾಪಗಳನ್ನು ನಾನು (ನನ್ನ ಕೃಪಾಗುಣದಿಂದ) ಸಹಿಸಿ ಕೊಂಡು (ನಿನ್ನ ಮೇಲೆ ನನಗೆ ಉಂಟಾದ ವಾತ್ಸಲ್ಯದಿಂದ) ಅವುಗಳನ್ನೇ ಪುಣ್ಯವೆಂದು ನೆನೆಸುತ್ತಿರುವಾಗ ನೀನು ದುಃಖಪಡುವುದು ಸರಿಯೇ?—

('ಮಾಶುಚಃ' ಎಂಬುದರಿಂದ ಈ ಭಗವದಭಿಪ್ರಾಯ ವಿಶೇಷವನ್ನೂ ಇಲ್ಲಿ ತಿಳಿಸಿದ್ದಾರೆ.)

[ಒಟ್ಟಿನಲ್ಲಿ ಈ ಉತ್ತರ ವಾಕ್ಯದ ಐದು ಪದಗಳಲ್ಲಿ

i. 'ಅಹಂ'—'ನಾನು' ಎಂದು ಪಾಪನಿವರ್ತಕನಾದ ಪರಮಾತ್ಮನ ಸ್ವರೂಪವೂ;

ii. 'ತ್ವಾ'—ನಿನ್ನನ್ನು ಎಂದು ಪಾಪಗಳಿಗೆ ಆಶ್ರಯನಾದ ಚೇತನನ ಸ್ವರೂಪವೂ;

iii. 'ಸರ್ವ—ಪಾಪೇಭ್ಯೋ' ಸಮಸ್ತ ಪಾಪಗಳಿಂದ ಎಂದು ಬಿಡಿಸ ಬೇಕಾದ ಪಾಪಗಳೂ.

iv. 'ಮೋಕ್ಷಯಿಷ್ಯಾಮಿ'—ಮುಕ್ತನಾಗುವಂತೆ ಮಾಡುತ್ತೇನೆ ಎಂದು ಆ ಪಾಪಗಳ ನಿವೃತ್ತಿ ಪ್ರಕಾರವೂ.

v. 'ಮಾಶುಚಃ'—ದುಃಖಿಸಬೇಡ ಎಂದು ಪಾಪನಿವೃತ್ತಿಯಿಂದ ಉಂಟಾಗುವ ಶೋಕ ನಿವೃತ್ತಿಯೂ ತಿಳಿಸಲ್ಪಟ್ಟಿದೆ.]

## ಚರಮಶ್ಲೋಕದ ಹಿರಿಮೆ
### (ಸೂತ್ರಗಳು 274 ರಿಂದ 289)

**274. ಉಯ್ಯಕ್ಕೊಂಡಾರ್ ವಿಷಯಮಾಗ ಉಡೈಯವರ್ ಅರುಳಿಚ್ಚೆಯ್ದ ವಾರ್ತೈಯೈ ಸ್ಮರಿಪ್ಪದು.**

ಉಯ್ಯಕ್ಕೊಂಡಾರ್ ಎಂಬುವರ ವಿಷಯವಾಗಿ ಶ್ರೀರಾಮಾನುಜರು ತಿಳಿಸಿದ ಮಾತನ್ನು ಇಲ್ಲಿ ಸ್ಮರಿಸತಕ್ಕದ್ದು. [ಈ ಶರಣ ವರಣದಲ್ಲಿ ಅಂದರೆ ಶರಣಾಗತಿ ಮಾಡುವುದರಲ್ಲಿ ಆಸೆ ಹುಟ್ಟುವುದರ ಅತಿಶಯವನ್ನು ತಿಳಿಸುವುದಕ್ಕಾಗಿ ಒಂದು ಐತಿಹ್ಯವು ತಿಳಿಸಲ್ಪಟ್ಟಿದೆ—

ಉಯ್ಯಕ್ಕೊಂಡಾರ್ ಎಂಬುವರು ತತ್ವ ನಿರ್ಣಯ ಮಾಡಿ ಭಕ್ತಿನಿಷ್ಠರಾಗಿದ್ದರು. ಅವರನ್ನು ಪ್ರಪತ್ತಿನಿಷ್ಠರನ್ನಾಗಿ ಮಾಡಬೇಕೆಂದು ಶ್ರೀರಾಮಾನುಜರು ಅವರಿಗೆ ಈ ಚರಮಶ್ಲೋಕಾರ್ಥವನ್ನು ಉಪದೇಶಿಸಿದಾಗ ಅವರು

"ಇದರ ಅರ್ಥ ವಿಚಾರಗಳೆಲ್ಲಾ ಬಹಳ ಚೆನ್ನಾಗಿದೆ. ಆದರೆ ಅದನ್ನು (ಭಕ್ತಿ ನಿಷ್ಠೆಯನ್ನು) ಬಿಟ್ಟು ಇದನ್ನು ಸ್ವೀಕರಿಸುವಂತಹ ಆಸೆ ನನಗಿಲ್ಲ" ಎಂದು ಹೇಳಿದರು. ಆದಕ್ಕೆ ಶ್ರೀರಾಮಾನುಜರು—"ನೀನು ವಿದ್ವಾಂಸ ನಾಗಿರುವುದರಿಂದ ಇದರ ಅರ್ಥವನ್ನು ಅರಿತೆ. ಆದರೆ ನಿನಗೆ ಭಗವ ದನುಗ್ರಹವಿಲ್ಲದಿರುವುದರಿಂದ ಇದರಲ್ಲಿ ನಿನಗೆ ಆಸೆ ಹುಟ್ಟಲಿಲ್ಲ" ಎಂದು ಹೇಳಿದರು.—ಇದರಿಂದ ಶರಣಾಗತಿಯಲ್ಲಿ ಆಸೆ ಹುಟ್ಟುವುದರ ಅತಿಶಯವು ತಿಳಿಸಲ್ಪಟ್ಟಿದೆ.]

**275. ಇದುಕ್ಕು ಈಶ್ವರ ಸ್ವಾತಂತ್ರ್ಯತ್ತಿಲೇ ನೋಕ್ಕು.**

ಇದು ಪರಮಾತ್ಮನ ಸ್ವಾತಂತ್ರ್ಯವನ್ನು ಪ್ರಕಾಶಪಡಿಸುತ್ತದೆ. (ಅಂದರೆ ಶಾಸ್ತ್ರವಿದಿತವಾದ ಇತರ ಸಕಲ ಧರ್ಮಗಳನ್ನೂ ವಾಸನೆಯೊಂದಿಗೆ ಬಿಡಿಸಿ ಈ ಚೇತನನಿಗೆ ತಾನೇ ನಿರಪೇಕ್ಷ ಸಾಧನವಾಗಿದೆ ಮತ್ತು ಚೇತನನ ಸಕಲ ಪಾಪಗಳನ್ನೂ ಹೋಗಲಾಡಿಸಿ, ತನ್ನ ಪ್ರಾಪ್ತಿಯನ್ನು ಉಂಟುಮಾಡುವ ಪರಮಾತ್ಮನ ಸ್ವಾತಂತ್ರ್ಯವು ಇದರಿಂದ ಪ್ರಕಾಶಿಸಲ್ಪಡುತ್ತದೆ.)

**276. ಇದುತಾನ್ ಅನುವಾದಕೋಟಿಯಿಲೇ ಎನ್ರು ವಂಗಿಪ್ಪುರತ್ತು-ನಂಬಿ ವಾರ್ತೈ.**

ಈ ಶ್ಲೋಕವು ಒಂದು ಅನುವಾದ ರೂಪವಾದುದಾಗಿ ಪುನರುಕ್ತಿಯಾಗಿದೆ ಎಂದು ವಂಗಿಪುರದ ನಂಬಿಯುವರು ತಿಳಿಸಿದ್ದಾರೆ.

**277. ಅರ್ಜುನನ್ ಕೃಷ್ಣನುಡೈಯ ಅನೈತ್ತೊಳಿಲ್‌ಗಳಾಲುಮ್ ಋಷಿಗಳ್ ವಾಕ್ಯಂಗಳಾಲುಮ್ ಕೃಷ್ಣನ್ ತನ್ ಕಾರ್ಯತ್ತಿಲೇ ಅಧಿಕರಿತ್ತುಕ್ಕೊಂಡುಪೋರುಗೈಯಾಲುಮ್ ಇವನೇ ನಮಕ್ಕು-ತ್ತಂಜಮೆನ್ರು ತುಣಿಂದಪಿನ್ಬು ತನ್ನೈಪತ್ತ ಚೊಲ್ಲುಗೈಯಾಲೇ.**

ಅದು ಹೇಗೆಂದರೆ—ಅರ್ಜುನನು ತನ್ನ ಬಾಲ್ಯದಿಂದಲೇ ಶ್ರೀಕೃಷ್ಣನ ಅತಿಮಾನುಷ ಚೇಷ್ಟಿತಗಳನ್ನು ನೋಡಿದ್ದುದರಿಂದಲೂ, ಶ್ರೀಕೃಷ್ಣನ ಮಹಿಮೆಯನ್ನು ಋಷಿಗಳ ವಾಕ್ಯದಿಂದ ಅರಿತಿದ್ದುದರಿಂದಲೂ, ಸರ್ವದಾ ತನ್ನ ಕಾರ್ಯಗಳನ್ನು ಕೃಷ್ಣನು ತಾನೇ ವಹಿಸಿಕೊಂಡು ನಡೆಸಿಕೊಡುತ್ತಾ ತನ್ನನ್ನು ರಕ್ಷಿಸುತ್ತಿದ್ದುದರಿಂದಲೂ, ಶ್ರೀಕೃಷ್ಣನು ಗೀತೆಯಲ್ಲಿ ಉಪದೇಶಿ ಸಿರುವ ಕರ್ಮ, ಜ್ಞಾನ, ಭಕ್ತಿಯೋಗ ಸಾಧನೆಗಳು ತನಗೆ ರಕ್ಷಕಗಳಲ್ಲ ಅವನೇ ತನಗೆ ರಕ್ಷಕನೆಂಬುದನ್ನು ಅವನು ತಾನಾಗಿಯೇ ಅರಿತಿದ್ದನು.

ಹಾಗೆ ಅವನು ಅರಿತ ಅನಂತರ ನನ್ನನ್ನು ಶರಣು ಹೊಂದು ಎಂದು ಶ್ರೀಕೃಷ್ಣ ಕೊನೆಯಲ್ಲಿ ತಿಳಿಸಿರುವುದರಿಂದ ಈ ಶ್ಲೋಕವು ಕೇವಲ ಪುನ-ರುಕ್ತಿಯಾಗಿದೆ ಎಂಬುದು ಅವರ ಅಭಿಪ್ರಾಯ.

**278. ಪುರಂಬು ಪಿರಂದದೆಲ್ಲಾಮ್ ಇವನ್‌ನೆಂಜ್ಞೈ ಶೋಧಿಕ್ಕೈಕ್ಕಾಗ.**

ಅರ್ಜುನನಿಗೆ ಮೊದಲು ಉಪಾಯಾಂತರಗಳಾದ ಕರ್ಮ, ಜ್ಞಾನ, ಭಕ್ತಿ ಯೋಗಗಳನ್ನು ಉಪದೇಶಿಸಿದ್ದೆಲ್ಲಾ ಅವನ ಹೃದಯವನ್ನು ಪರೀಕ್ಷಿಸು ವುದಕ್ಕಾಗಿ—(ಅಂದರೆ ತನಗೆ ಮಾರ್ಗದರ್ಶನ ನೀಡೆಂದು ಶರಣನಾದ ಅರ್ಜುನನಿಗೆ ಶ್ರೀಕೃಷ್ಣ ಉಪಾಯವನ್ನು ಉಪದೇಶಿಸಲು ಪ್ರಾರಂಭಿಸಿ ದಾಗ ಗೀತೆಯ ಆರಂಭದಲ್ಲೇ ಈ ಶರಣಾಗತಿ ಉಪಾಯವನ್ನು ಉಪ ದೇಶಿಸದೆ, ಕರ್ಮ, ಜ್ಞಾನ, ಭಕ್ತಿ ಯೋಗಗಳನ್ನೆಲ್ಲಾ ಮೊದಲು ವಿವರ ವಾಗಿ ಉಪದೇಶಿಸಿದ್ದಾನೆ. ಅದು ಏತಕ್ಕೆಂದರೆ ಅವನು ಆ ಉಪಾಯಾಂ ತರಗಳ ಅನುಷ್ಠಾನದಲ್ಲೇ ನಿಂತು ಬಿಡುವನೋ, ಇಲ್ಲ ಅವುಗಳ ದೋಷ ದರ್ಶನ ಪಡೆದವನಾಗಿ ಈ ಚರಮೋಪಾಯವಾದ ಶರಣಾಗತಿಯ ಉಪ ದೇಶಕ್ಕೆ ಅಧಿಕಾರಿಯಾಗಬಲ್ಲನೋ ಎಂದು ಅವನ ಹೃದಯವನ್ನು ಪರೀಕ್ಷಿ ಸುವುದಕ್ಕಾಗಿ ಉಪಾಯಾನ್ತರಗಳನ್ನು ಗೀತೆಯಲ್ಲಿ ಅರ್ಜುನನಿಗೆ ಮೊದಲು ಉಪದೇಶಿಸಿದ್ದಾನೆ ಎಂದು ಅರ್ಥ.)

**279. ವೇದಪುರುಷನ್ ಉಪಾಯಾಂತರಂಗಳೈ ವಿಧಿತ್ತದು ಕೊಂಡಿ-ಪ್ಪಶುವುಕ್ಕು ತ್ತಡಿಕಟ್ಟಿವಿಡುವಾರೈಪ್ಪೋಲೇ ಅಹಂಕಾರಮಮ-ಕಾರಂಗಳಾಲ್‌ವಂದ ಕಳಿಪ್ಪತ್ತು ಸ್ವರೂಪಜ್ಞಾನವತ್ ಪಿರಕ್ಕೈ-ಕ್ಕಾಗ.**

ವೇದ ಪುರುಷನು ಉಪಾಯಾನ್ತರಗಳನ್ನು ಮೋಕ್ಷ ಸಾಧನವಾಗಿ ವಿಧಿಸಿರು ವುದೇತಕ್ಕೆಂದರೆ—ತುಂಟ ಹಸುವನ್ನು ವಶಪಡಿಸಿಕೊಳ್ಳಲು ಅದರ ಕುತ್ತಿಗೆಗೆ ಒಂದು ಮರದ ದಿಬ್ಬಿಯನ್ನು ಕಟ್ಟಿಬಿಡುವಂತೆ ಅಹಂಕಾರ ಮಮಕಾರ ವಶ್ಯನಾಗಿ ಗರ್ವದಿಂದ ಮೆರೆಯುವ ಚೇತನನಿಗೆ ಅಹಂಕಾರವು ನಾಶವಾಗಿ ಆತ್ಮನ ಯಥಾರ್ಥ ಸ್ವರೂಪಜ್ಞಾನ ಅಂದರೆ ಭಗವತ್ ಪಾರತಂತ್ರ್ಯ ಜ್ಞಾನವುಂಟಾಗುವುದಕ್ಕಾಗಿ ಕಾಯಕ್ಲೇಶರೂಪವಾದ ಈ ಕರ್ಮಾನು-ಷ್ಠಾನಗಳೂ, ಇಂದ್ರಿಯ ಜಯ ಮುಂತಾದ ದುಷ್ಕರವಾದ ವ್ಯಾಪಾರ ಗಳೂ ವೇದದಲ್ಲಿ ವಿಧಿಸಲ್ಪಟ್ಟಿವೆ.

**280. ಸನ್ನ್ಯಾಸಿ ಮುಂಸ್ಪುಳ್ಳವತ್ತೈ ವಿಡುಮಾಪೋಲೇ ಇವ್ವಳವು-ಪಿರಂದವನ್ ಇವತ್ತೈ ವಿಟ್ಟಾಲ್ ಕುತ್ತಮ್ ವಾರಾದು.**

(ಹಾಗಾದರೆ ಆತ್ಮಸ್ವರೂಪಜ್ಞಾನವುಂಟಾಗಲು ಕಾರಣವಾಗಿರುವ ಈ ಉಪಾಯಾನ್ತರಗಳನ್ನು ಬಿಡುವುದು ಸರಿಯೇ ಎಂದರೆ) ಕೊನೆಯ ಆಶ್ರಮ ವನ್ನು ಸ್ವೀಕರಿಸಿರುವ ಸನ್ಯಾಸಿಯಾದವನು ಮೊದಲಿನ ಆಶ್ರಮ ಧರ್ಮ ಗಳನ್ನು ತ್ಯಜಿಸುವಂತೆ ಉಪಾಯಾನ್ತರಗಳ ಅನುಷ್ಠಾನ ಚೇತನನ ಸ್ವರೂ ಪಕ್ಕೆ ವಿರೋಧವಾದವುಗಳು ಎಂದು ಅರಿತು, ಅವುಗಳನ್ನು ತ್ಯಜಿಸಿ, ಈ ಸಿದ್ಧೋಪಾಯವನ್ನು ಸ್ವೀಕರಿಸುವಂತಹ ಜ್ಞಾನ ಪರಿಪಾಕವುಂಟಾದವನು ಈ ಉಪಾಯಾನ್ತರಗಳನ್ನು ತ್ಯಜಿಸಿದರೆ ದೋಷವೇನೂ ಬರುವುದಿಲ್ಲ.

**281. ಇವನ್ ತಾನ್ ಇವ್ವೈತನ್ನೈ ನೇರಾಗವಿಟ್ಟಿಲನ್.**

(ಸಾಧನಾಂತರಗಳನ್ನು ಪರಿತ್ಯಜಿಸಿ ಸಿದ್ಧೋಪಾಯವನ್ನು ಅಂದರೆ ಶರಣಾ ಗತಿ ಯೋಗವನ್ನು ಸ್ವೀಕರಿಸಿರುವ) ಈ ಚೇತನನಾದರೋ ಈ ಕರ್ಮ ಜ್ಞಾನಾದಿ ಸಾಧನಾಂತರಗಳನ್ನು ಸ್ವರೂಪತಃ ತ್ಯಾಗಮಾಡುವುದಿಲ್ಲ.

**282. ಕರ್ಮಮ್ ಕೈಂಕರ್ಯತ್ತಿಲೇ ಪುಗುಮ್; ಜ್ಞಾನಮ್ ಸ್ವರೂಪ ಪ್ರಕಾಶತ್ತಿಲೇ ಪುಗುಮ್; ಭಕ್ತಿ ಪ್ರಾಪ್ಯರುಚಿಯಿಲೇ ಪುಗುಮ್; ಪ್ರಪತ್ತಿ ಸ್ವರೂಪಯಾಥಾತ್ಮ್ಯ ಜ್ಞಾನತ್ತಿಲೇ ಪುಗುಮ್.**

ಕರ್ಮವು ಕೈಂಕರ್ಯದಲ್ಲಿ ಸೇರುತ್ತದೆ. (ಅಂದರೆ ಅವನು ಅನುಷ್ಠಿಸುವ ವಿಹಿತ ಕರ್ಮವು ಸಾಧನ ಬುದ್ಧಿ ಹೋದರೆ ಕರುಣೆಯಿಂದಲೂ ಪರಾರ್ಥ ವಾಗಿಯೂ ಅನುಷ್ಠಿಸಲ್ಪಡುವುದರಿಂದ ಭಗವಂತನಿಗೆ ಅತ್ಯಂತ ಪ್ರಿಯಕರ ವಾದುದಾಗಿ ಅವನ ಪ್ರೀತಿಗಾಗಿ ಮಾಡುವ ಅವನ ಕೈಂಕರ್ಯದಲ್ಲಿ ಸೇರಿ ಕೊಳ್ಳುತ್ತದೆ.)

ಜ್ಞಾನವು ಸ್ವರೂಪ ಪ್ರಕಾಶದಲ್ಲಿ ಸೇರುತ್ತದೆ. (ಅಂದರೆ ಭಗವ ದನನ್ಯಾರ್ಹ ಶೇಷತ್ವ ಸ್ವರೂಪಜ್ಞಾನ ಪೂರ್ವಕವಾಗಿ ಭಗವತ್ಸ್ವರೂಪ ವನ್ನು ಸಾಕ್ಷಾತ್ಕರಿಸಲು ಬೇಕಾದ ಜ್ಞಾನಯೋಗವು ಸಾಧನ ಬುದ್ಧಿ ಯಿಲ್ಲದೆ ಇದ್ದರೆ ಸ್ವಸ್ವರೂಪ ಜ್ಞಾನಪೂರ್ವಕವಾಗಿ ಲಭಿಸುವ ಪರ ಸ್ವರೂಪ ಪ್ರಕಾಶದಲ್ಲಿ ಸೇರಿಕೊಳ್ಳುತ್ತವೆ.)

ಭಕ್ತಿಯು ಪ್ರಾಪ್ಯ ರುಚಿಯಲ್ಲಿ ಸೇರುತ್ತದೆ. (ಅಂದರೆ ಭಗವತ್ಪ್ರಾಪ್ತಿಗೆ ಸಾಧನವಾದ ಭಕ್ತಿಯು ಸಾಧನ ಬುದ್ಧಿ ಹೋದರೆ ಭೋಜನಕ್ಕೆ ಹಸಿವು

ಬೇಕಾಗಿರುವಂತೆ ಪ್ರಾಪ್ಯವಾದ (ಪುರುಷಾರ್ಥವಾದ) ಭಗವತ್‌ಕೈಂಕರ್ಯಕ್ಕೆ ಬೇಕಾದ ರುಚಿಯಾಗಿ ಸೇರಿಕೊಳ್ಳುತ್ತದೆ. (ಹೇಗೆ ಹಸಿವಿಲ್ಲದಿದ್ದರೆ ಭೋಜನವು ರುಚಿಸುವುದಿಲ್ಲವೋ ಹಾಗೆಯೇ ಭಕ್ತಿಯಿಲ್ಲದಿದ್ದರೆ ಭಗವತ್ ಕೈಂಕರ್ಯವು ರುಚಿಸುವುದಿಲ್ಲ.)

**ಪ್ರಪತ್ತಿಯು** ಸ್ವರೂಪ ಯಾಥಾತ್ಮ್ಯಜ್ಞಾನದಲ್ಲಿ ಸೇರುತ್ತದೆ. (ಅಂದರೆ ಸಿದ್ಧೋಪಾಯವಾದ ಈ ಪ್ರಪತ್ತಿಯು ಏಕಪದದಲ್ಲಿ ತಿಳಿಸಿರುವಂತೆ ಸಾಧನತ್ವ ಬುದ್ಧಿ ಹೋದರೆ ಭಗವಂತನಿಗೆ ಅತ್ಯಂತ ಪರತಂತ್ರವಾಗಿ ಅನನ್ಯ ಶರಣವಾಗಿರುವ ತನ್ನ ನಿಜಸ್ವರೂಪದ ಜ್ಞಾನದಲ್ಲಿ ಸೇರಿಕೊಳ್ಳುತ್ತದೆ.

(ಭಕ್ತಿಯು ಭಗವತ್‌ಪ್ರಾಪ್ತಿಗೆ ಸಾಧನವಾಗಿ ಆಚರಿಸುವಾಗ ಕರ್ಮ ಜ್ಞಾನಗಳು ಆ ಭಕ್ತಿಗೆ ಅಂಗಗಳಾಗಿ ಇರುತ್ತವೆ. ಪ್ರಪತ್ತಿಯನ್ನು ಸ್ವೀಕರಿಸಿದ ಮೇಲೆ ಕರ್ಮವು ಭಗವತ್‌ಕೈಂಕರ್ಯವಾಗಿಯೂ, ಜ್ಞಾನ ಭಕ್ತಿಗಳೆರಡೂ ಆ ಕೈಂಕರ್ಯಕ್ಕೆ ಪ್ರಕಾರಗಳಾಗಿಯೂ ಇರುತ್ತವೆ. ಅಂದರೆ ಅದಕ್ಕೆ ಬೇಕಾದ ಜ್ಞಾನವಾಗಿಯೂ, ರುಚಿಯಾಗಿಯೂ ಪರಿಣಮಿಸುತ್ತವೆ. ಆದ್ದರಿಂದ ಕರ್ಮ ಜ್ಞಾನ ಭಕ್ತಿ ಎಂಬ ಈ ಸಾಧನಾಂತರಗಳನ್ನು ಪ್ರಪನ್ನನಾದ ಚೇತನನು ಸ್ವರೂಪತಃ ತ್ಯಜಿಸುವುದಿಲ್ಲ. ಅವುಗಳಲ್ಲಿ ಸಾಧನಬುದ್ಧಿಯನ್ನು ತ್ಯಜಿಸಿ ಭಗವತ್‌ಕೈಂಕರ್ಯವಾಗಿ ಆಚರಿಸುತ್ತಾನೆ.)

**283. ಒರುಫಲತ್ತುಕ್ಕು ಅರಿಯವಳಿಯೈಯುಮ್ ಎಳಿಯವಳಿಯೈಯುಮ್ ಉಪದೇಶಿಕ್ಕೈಯಾಲೇ ಇವ್ವೈ ಇರಂಡುಮ್ ಒಳಿಯ ಭಗವತ್‌ಪ್ರಸಾದಮೇ ಉಪಾಯಮಾಗಕ್ಕಡವದು.**

ಭಗವತ್ಪ್ರಾಪ್ತಿ ಎಂಬ ಒಂದು ಫಲಕ್ಕೆ ಕಷ್ಟಸಾಧ್ಯವಾದ ಭಕ್ತಿಮಾರ್ಗವೂ, ಸುಲಭಸಾಧ್ಯವಾದ ಶರಣಾಗತಿ ಮಾರ್ಗವೂ ಉಪದೇಶಿಸಲ್ಪಟ್ಟಿವೆ. ಇವೆರಡು ಮಾರ್ಗಗಳಿಗಿಂತ ಭಗವಂತನ ಅನುಗ್ರಹವೇ ಪ್ರಧಾನವಾದ ಉಪಾಯವಾಗಿದೆ. (ಏತಕ್ಕೆಂದರೆ ಈ ಎರಡು ಮಾರ್ಗಗಳನ್ನೂ ವ್ಯಾಜವಾಗಿ ಹೊಂದಿ ಫಲಕೊಡುವವನು ಪರಮಾತ್ಮನೇ ಆಗಿರುವುದರಿಂದ ಅವನ ಅನುಗ್ರಹವೇ ಉಪಾಯವಾಗಬಲ್ಲದು ಎಂದು ಅಭಿಪ್ರಾಯ.)

**284. ಪೇತ್ತುಕ್ಕು ವೇಂಡುವದು ವಿಲಕ್ಕಾಮೈಯುಮ್, ಇರಪ್ಪುಮ್.**

ಆದಾಗ್ಯೂ ಫಲಪ್ರಾಪ್ತಿಗೆ ಚೇತನನು ಮಾಡಬೇಕಾದ ಕಾರ್ಯವೇನೆಂದರೆ ಪರಮಾತ್ಮನ ರಕ್ಷಣಾಕಾರ್ಯವನ್ನು ತನ್ನ ಸ್ವಯತ್ನದಿಂದ ತಡೆಯ

ದಿರುವಿಕೆಯು ಮತ್ತು (ಆ ರಕ್ಷಣೆಯನ್ನು ಪುರುಷಾರ್ಥವಾಗಿ ಪಡೆಯಲು ಬೇಕಾದ) ಜಗತ್ತಿನಲ್ಲಿ ಇರುವಿಕೆಯು (ಅಂದರೆ ಬದುಕಿರುವಿಕೆಯು.)

**285. ಚಕ್ರವರ್ತಿತಿರುಮಗನ್ ಪಾಪತ್ತೋಡೇ ವರಿಲುಮ್ ಅನ್ಗೈ-ಯುಮ್ ಎನ್ರಾನ್; ಇವನ್ ಪುಣ್ಯತ್ತೈಪ್ಪೋಗಟ್ಟು ವರವೇ-ಣುಮ್ ಎನ್ರಾನ್.**

ಶ್ರೀರಾಮಚಂದ್ರನು 'ಯದಿವಾ ರಾವಣ ಸ್ವಯಂ' ಅಂದರೆ ಪಾಪದಿಂದ ಕೂಡಿರುವ ರಾವಣನೇ ಬಂದರೂ ರಕ್ಷಿಸುತ್ತೇನೆ ಎಂದು ಹೇಳಿದ್ದಾನೆ. ಶ್ರೀಕೃಷ್ಣ ಪರಮಾತ್ಮ 'ಸರ್ವಧರ್ಮಾನ್ ಪರಿತ್ಯಜ್ಯ'—ಅಂದರೆ ಸರ್ವ ಧರ್ಮಗಳನ್ನೂ ಅಂದರೆ ಪುಣ್ಯಗಳನ್ನೂ ತ್ಯಜಿಸಿ ಬಿಟ್ಟುಬರಬೇಕೆಂದು ಹೇಳಿದ್ದಾನೆ.

**286. "ಆಸ್ತಿಕನಾಯ್ ಇವ್ವರ್ಥತ್ತಿಲ್ ರುಚಿವಿಶ್ವಾಸಂಗಳುಡೈಯ-ನಾಯ್ ಉಜ್ಜೀವಿತ್ತಲ್, ನಾಸ್ತಿಕನಾಯ್ ನಶಿತ್ತಲೊಳಿಯ ನಡುವಿಲ್ ನಿಲೈಯಿಲ್ಲೈ" ಎನ್ರು ಭಟ್ಟರುಕ್ಕು ಎಂಬಾರ್ ಅರುಳಿಚ್ಚೆಯ್ದ ವಾರ್ತೈ.**

ಆಸ್ತಿಕನಾಗಿ ಈ ಶ್ಲೋಕದ ಅರ್ಥಗಳಲ್ಲಿ ರುಚಿ ವಿಶ್ವಾಸಗಳನ್ನು ಹೊಂದಿದವನಾಗಿ ಉಜ್ಜೀವಿಸಬಹುದು; ಇಲ್ಲ (ಇದನ್ನು ನಂಬದೆ ಅನಾದರಿಸಿ) ನಾಸ್ತಿಕನಾಗಿ ನಾಶಹೊಂದಬಹುದಲ್ಲದ ಇವೆರಡರ ನಡುವಿನ ಪರಿಸ್ಥಿತಿಯೊಂದೂ ಇಲ್ಲ ಎಂದು ಭಟ್ಟರಿಗೆ ಎಂಬಾರ್ರು ತಿಳಿಸಿದ್ದಾರೆ.

**287. ವ್ಯವಸಾಯಮಿಲ್ಲಾದವನುಕ್ಕು ಇದಿಲ್ಅನ್ವಯಮ್ ಅಮುತ್ತಿಲ್ ಭೋಜನಂಪೋಲೆ.**

ಈ ಶ್ಲೋಕದಲ್ಲಿ ತಿಳಿಸಿರುವುದಕ್ಕೆ ಅನುಗುಣವಾದ (ಅಂದರೆ ಸರ್ವಧರ್ಮಗಳ ತ್ಯಾಗಕ್ಕೂ ಸಿದ್ಧೋಪಾಯವಾದ ಶರಣಾಗತಿಗೂ ಅನುಗುಣವಾದ) ನಂಬಿಕೆ ಅಧ್ಯವಸಾಯಗಳಿಲ್ಲದವನು ಇದರಲ್ಲಿ ಅನ್ವಯಿಸಿದರೆ ಅಜೀರ್ಣದೆಶೆಯಲ್ಲಿ ಮಾಡಿದ ಭೋಜನದಂತೆ ವಿನಾಶಹೇತುವಾಗಿ ಪರಿಣಮಿಸುತ್ತದೆ.

**288. "ವಿಟ್ಟುಶಿತ್ತರ್ ಕೇಟ್ಟರುಪ್ಪರ್" ಎನ್ಗಿರಪಡಿಯೇ ಅಧಿಕಾರಿ-ಗಳ್ ನಿಯತರ್.**

'ವಿಟ್ಟುಶಿತ್ತರ್ ಕೇಟ್ಟಿರುಪ್ಪರ್' ಅಂದರೆ ಪರಮಾತ್ಮನ 'ಮಾಂ ಏಕಂ ಶರಣಂ ವ್ರಜ'—ಎಂಬ ಈ ಉಪದೇಶವನ್ನು ಪೆರಿಯಾಳ್ವಾರ್‌ರ್ರವರು ಕೇಳಿ ತನ್ನಿಷ್ಟರಾಗಿರುವರು ಅಂದರೆ ಅದರ ಪ್ರಕಾರ ನಡೆಯುತ್ತಿರುವರು ಎಂದು ಗೋದಾದೇವಿಯು ನಾಚ್ಚಿಯಾರ್ ತಿರುಮೊಳಿ (11–2) ಪಾಶುರ ದಲ್ಲಿ ತಿಳಿಸಿರುವಂತೆ ಈ ಶ್ಲೋಕದ ಉಪದೇಶವನ್ನು ಕೇಳಿ ಅದರಂತೆ ನಡೆಯುವವರೇ ಈ ಶ್ಲೋಕದ ಅರ್ಥವನ್ನು ಅರಿಯಲು ಅಧಿಕಾರಿಗಳು. ಅಂತಹವರು ಬಹಳ ದುರ್ಲಭ.

**289.** **"ವಾರ್ತ್ಕೈಯರಿಪವರ್" ಎನ್ಗಿರ ಪಾಟ್ಟುಮ್ "ಅತ್ತನಾಗಿ" ಎನ್ಗಿರ-ಪಾಟ್ಟುಮ್ ಇದುಕ್ಕರ್ಥಮಾಗ ಅನುಸಂಧೇಯಮ್.**

"ವಾರ್ತ್ಕೈಯರಿಪವರ್" ಎಂಬ ನಮ್ಮಾಳ್ವಾರ್ರವರ ತಿರುವಾಯ್ಮೊಳಿ (7–5–10) ಪಾಶುರವೂ "ಅತ್ತನಾಹಿ" ಎಂಬ ತಿರುಮಳಿಶೈ ಆಳ್ವಾರ್ರವರ ತಿರುಚ್ಚಂದವಿರುತ್ತದ (115) ಪಾಶುರವೂ ಈ ಶ್ಲೋಕಕ್ಕೆ ಅರ್ಥವಾಗಿ ಅನುಸಂಧಾನ ಮಾಡತಕ್ಕುದಾಗಿವೆ.

"'ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ' ಎಂಬ ಈ ಒಳ್ಳೆಯ ಮಾತನ್ನು ಅರಿತವರು ಈ ಆತ್ಮನನ್ನು ಸುತ್ತಿ ಅಂಟಿಕೊಂಡಿರುವ ಜನ್ಮಗಳೂ, ಆ ಜನ್ಮಗಳಲ್ಲಿ ಉಂಟಾಗುವ ವ್ಯಾಧಿ ನೋವುಗಳೂ, ಕೆಲವು ಕಾಲವಾದ ಮೇಲೆ ಸಿಡಿಲು ಬೀಳುವಂತೆ ಬರುವ ಮುಪ್ಪೂ ಇವುಗಳೊಂದಿಗೆ ಕೂಡಿರುವ ಈ ಸಂಸಾರದ ದುಃಖವನ್ನು ಹೋಗಲಾಡಿಸಿ, ಅದು ಹೋದ ಮೇಲೆ ಬರುವ ಕೈವಲ್ಯವೆಂಬ ಮಹಾದುಃಖವನ್ನೂ ಬೇರು ಸಹಿತ ನಾಶ ಪಡಿಸಿ, ತನ್ನ ಪಾದಕಮಲಗಳಲ್ಲಿ ಸೇರಿಸಿ ಪುನರಾವರ್ತಿ ಇಲ್ಲದಂತೆ ಮಾಡುವ ಪರಮಾತ್ಮನ ಈ ಮಹೋಪಕಾರವನ್ನು ಅರಿತವರಾಗಿ ಮನಸ್ಸಿನಲ್ಲಿ ಗ್ರಹಿಸಿದ ಮೇಲೆ ರಕ್ಷಕನಾದ, ಆಶ್ಚರ್ಯಚೇಷ್ಟಿತನಾದ ಪರಮಾತ್ಮನಿಗಲ್ಲದೆ ಬೇರೆ ಯಾರಿಗಾದರೂ ದಾಸರಾಗುವರೋ"— ಎಂಬುದೇ 'ವಾರ್ತ್ಕೈಯರಿಪವರ್' ಎಂಬ ಪಾಶುರದ ಸಾರಾಂಶ.

"ಹೇಯ ಪ್ರತ್ಯನೀಕನಾಗಿ, ಅಸ್ಪೃಷ್ಟ ಸಂಸಾರಗಂಧನಾಗಿ, ಮುಕ್ತಿಪ್ರದನಾದ ಪರಮಾತ್ಮನು, ಸಮಸ್ತ ಆತ್ಮರೂ ಜ್ಞಾನೈಕಾಕಾರದಿಂದ ತುಲ್ಯರಾಗಿದ್ದರೂ, ದೇವಾದಿ ದೇಹಗಳ ಭೇದದಿಂದ ತುಲ್ಯರಾಗದೇ ಇರುವ ಅವರ ಫಲವಿಧವಾದ ಜನ್ಮಗಳನ್ನು ಹೋಗಲಾಡಿಸಿ; ನಿತ್ಯಸಂಸಾರಿಗಳಾದ ನಮ್ಮನ್ನು ನಿತ್ಯಸೂರಿಗಳಂತೆ ಕೈಂಕರ್ಯಪರರನ್ನಾಗಿ ಮಾಡಿ; ಹಿತಪರನಾದ ತಂದೆಯಂತೆಯೂ, ಪ್ರಿಯಪರೆಯಾದ ತಾಯಿಯಂತೆಯೂ, ಆಳುವ

ಸ್ವಾಮಿಯಹಾಗಿಯೂ, ಹೀಗೆ ಸರ್ವವಿಧಬಂಧುವಾಗಿ; ನಮ್ಮ ಕೀಳುತನ ವನ್ನೂ ತನ್ನ ಹಿರಿಮೆಯನ್ನೂ ನೋಡದೆ ನಮ್ಮ ಸರ್ವವಿಧ ರಕ್ಷಣೆಯ ಭಾರವನ್ನು ತಾನೇ ವಹಿಸಿಕೊಂಡು ನಮ್ಮನ್ನು ರಕ್ಷಿಸಲು ನಮ್ಮ ಒಳಗೆ ಪ್ರವೇಶಿಸಿ ನಮ್ಮೊಂದಿಗೆ ಒಂದಾಗಿ ಕಲೆತಿರುವಾಗ, ಬುದ್ಧಿಯಿಲ್ಲದ ಮನಸ್ಸೇ ನೀನು ಏತಕ್ಕಾಗಿ ದುಃಖಸಾಗರದಲ್ಲಿ ಮುಳುಗಿದ್ದೀಯೆ? —(ಅಂದರೆ ನಿನ್ನನ್ನು ರಕ್ಷಿಸಲು ಪರಮಾತ್ಮನು ಅಂತರಾತ್ಮನಾಗಿ ಕಂಕಣ ಬದ್ಧನಾಗಿ ಇರುವಾಗ ನೀನು ದುಃಖಿಸಲು ಕಾರಣವಿಲ್ಲ) ಎಂಬುದೇ 'ಅತ್ತನಾಹಿ' ಎಂಬ ಪಾಶುರದ ಸಾರಾಂಶ.

ಈ ಎರಡು ಪಾಶುರಗಳೂ ಈ ಚರಮಶ್ಲೋಕದ ಅರ್ಥವನ್ನು ಪ್ರತಿ ಪಾದಿಸುವುದರಿಂದ ಇವು ಅದಕ್ಕೆ ಅರ್ಥವಾಗಿ ಅನುಸಂಧಾನ ಮಾಡತಕ್ಕ ಪಾಶುರಗಳಾಗಿವೆ.

ಚರಮಶ್ಲೋಕ ಪ್ರಕರಣಂ ಮುತ್ತಿತ್ತು

---

## ಚರಮಶ್ಲೋಕದ ಸಾರಾಂಶ

**ಚರಮಶ್ಲೋಕದಲ್ಲಿ** ಮೂರು ವಾಕ್ಯಗಳಿವೆ:

1. **ಸರ್ವಧರ್ಮಾನ್ ಪರಿತ್ಯಜ್ಯ ಮಾಂ ಏಕಂ ಶರಣಂ ವ್ರಜ**—ಎಂಬುದೇ ಮೊದಲನೆಯ ವಾಕ್ಯ.

**ಸರ್ವಧರ್ಮಾನ್**—ಸಮಸ್ತ ಧರ್ಮಗಳನ್ನೂ

**ಪರಿತ್ಯಜ್ಯ**—ಸಂಪೂರ್ಣವಾಗಿ ತ್ಯಜಿಸಿ (ಇದಕ್ಕೆ ಗೀತಾಭಾಷ್ಯದಲ್ಲಿ ಶ್ರೀರಾಮಾನುಜರು ಕರ್ಮ ಜ್ಞಾನ ಭಕ್ತಿಯೋಗಾದಿ ಸಮಸ್ತ ಧರ್ಮಗಳನ್ನೂ ಸ್ವರೂಪತಃ ತ್ಯಾಗಮಾಡದೆ ಅವುಗಳಲ್ಲಿರುವ ಕರ್ತೃತ್ವ, ಮಮತಾ, ಫಲ ತ್ಯಾಗ ಮಾಡಬೇಕು ಅಂದರೆ ಅಹಂಕಾರ, ಮಮಕಾರ, ಫಲಾಸಕ್ತಿಗಳೆಲ್ಲ ವನ್ನೂ ಮತ್ತು ಅವು ಫಲಕ್ಕೆ ಸಾಧನಗಳು ಎಂಬ ಉಪಾಯ ಬುದ್ಧಿಯನ್ನೂ ತ್ಯಜಿಸಿ, ಭಗವತ್ ಕೈಂಕರ್ಯವಾಗಿ ಅವುಗಳನ್ನು ಆಚರಿಸಬೇಕು ಎಂದು ಅರ್ಥ ಮಾಡಿದ್ದಾರೆ. ಇದನ್ನೇ ಇಲ್ಲಿ ಶ್ರೀ ಪಿಳ್ಳೈಲೋಕಾಚಾರ್ಯರು 281 ಮತ್ತು 282ನೇ ಸೂತ್ರದಲ್ಲಿ ವಿವರಿಸಿ ತಿಳಿಸಿದ್ದಾರೆ. ಅಹಂಕಾರ, ಮಮಕಾರ, ಫಲಾ ಸಕ್ತಿಗಳನ್ನೂ ಉಪಾಯ ಭಾವವನ್ನೂ ಸಂಪೂರ್ಣವಾಗಿ ತ್ಯಜಿಸಿ, ಕರ್ತವ್ಯ ಕರ್ಮಗಳನ್ನು ಭಗವತ್ ಕೈಂಕರ್ಯವಾಗಿಯೂ, ಜ್ಞಾನವನ್ನು ಭಗವಂತನ

ಸ್ವರೂಪ, ರೂಪಗುಣ ಪ್ರಕಾಶಕವಾಗಿಯೂ, ಭಕ್ತಿಯನ್ನು ಭಗವಂತನ ಕೈಂಕರ್ಯದಲ್ಲಿ ಪ್ರೀತಿ, ರುಚಿಯಾಗಿಯೂ ಮಾರ್ಪಡಿಸಿಕೊಂಡು, ಭಗವಂತನಲ್ಲಿ ದಾಸ್ಯಭಾವ ಹೊಂದಿ ಶರಣಾಗತಿ ಮಾಡಬೇಕೆಂದೂ, ಶರಣಾಗತಿಯಲ್ಲೂ ಉಪಾಯಭಾವ ಇರಕೂಡದು ಎಂದೂ ತಿಳಿಸಿದ್ದಾರೆ.)

**ಮಾಂ ಏಕಂ**—ನನ್ನೊಬ್ಬನನ್ನೇ (ಭಗವತ್ಪ್ರಾಪ್ತಿಗೆ ಶರಣಾಗತಿಯೂ ಉಪಾಯವಲ್ಲ; ಪರಮಾತ್ಮನೊಬ್ಬನೇ ಉಪಾಯವೆಂದರಿತು)

**ಶರಣಂ ವ್ರಜ**—ಉಪಾಯವಾಗಿ ಸ್ವೀಕರಿಸು—ಅಂದರೆ ಸಮಸ್ತ ಧರ್ಮಗಳಲ್ಲಿರುವ ಅಹಂಕಾರ ಮಮಕಾರ ಫಲಾಸಕ್ತಿಗಳನ್ನೂ, ಅವು ಫಲಕ್ಕೆ ಸಾಧನಗಳು ಎಂಬ ಉಪಾಯಬುದ್ಧಿಯನ್ನೂ ಸಂಪೂರ್ಣವಾಗಿ ತ್ಯಜಿಸಿ, ವಾತ್ಸಲ್ಯ ಸ್ವಾಮಿತ್ವ ಸೌಶೀಲ್ಯ ಸೌಲಭ್ಯಾದಿ ಗುಣವಿಶಿಷ್ಟನಾದ ಪರಮಾತ್ಮನೊಬ್ಬನಲ್ಲೇ ಶರಣಾಗತಿ ಮಾಡು ಎಂದು ಈ ಮೊದಲನೆಯ ವಾಕ್ಯದಲ್ಲಿ ಪರಮಾತ್ಮ ವಿಧಿಸಿದ್ದಾನೆ.

2. **ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ**—ಎಂಬುದೇ ಎರಡನೆಯ ವಾಕ್ಯ.

**ಅಹಂ**—ನಾನು

**ತ್ವಾ**—ನಿನ್ನನ್ನು

**ಸರ್ವಪಾಪೇಭ್ಯೋ**—ಸಮಸ್ತ ಪಾಪಗಳಿಂದಲೂ.

**ಮೋಕ್ಷಯಿಷ್ಯಾಮಿ**—ಮುಕ್ತನನ್ನಾಗಿ ಮಾಡುತ್ತೇನೆ—ಅಂದರೆ ಜ್ಞಾನ ಶಕ್ತ್ಯಾದಿಗುಣವುಳ್ಳ ಸರ್ವಶೇಷಿಯಾದ ಪರಮಾತ್ಮನಾದ ನಾನು, ಅಜ್ಞನೂ ಅಶಕ್ತನೂ ಆದ ಮತ್ತು ನನ್ನಲ್ಲಿ ಶರಣನಾದ ನಿನ್ನನ್ನು ನನ್ನ ಪ್ರಾಪ್ತಿಗೆ ವಿರೋಧಿಗಳಾದ ಸಮಸ್ತ ವಿಧವಾದ ಪಾಪಗಳಿಂದಲೂ ಮುಕ್ತನನ್ನಾಗಿ ಮಾಡುತ್ತೇನೆ ಎಂದು ಈ ಎರಡನೆಯ ವಾಕ್ಯದಲ್ಲಿ ಪರಮಾತ್ಮ ತನ್ನಲ್ಲಿ ಶರಣರಾದ ಸರ್ವರಿಗೂ ರಕ್ಷಣೆಯ ಭರವಸೆ ನೀಡಿದ್ದಾನೆ.

3. **ಮಾಶುಚಃ**—ಎಂಬುದೇ ಮೂರನೆಯ ವಾಕ್ಯ.

**ಮಾಶುಚಃ**—ನೀನು ದುಃಖಿಸಬೇಡ ಅಂದರೆ ಪಾಪವಿಮೋಚಕನಾದ ಪರಮಾತ್ಮನಲ್ಲಿ ಶರಣಾಗತಿ ಮಾಡಿದಮೇಲೆ ಚೇತನನು ದುಃಖಿಸಲು ಕಾರಣವಿಲ್ಲ. ಅವನು ದುಃಖಿಸದೆ ಪರಮಾತ್ಮನು ತನ್ನನ್ನು ರಕ್ಷಿಸುತ್ತಾನೆ ಎಂದು ನಿರ್ಭರನಾಗಿ ಇರಬೇಕು ಎಂದು ಮೂರನೆಯ ವಾಕ್ಯದಲ್ಲಿ ತಿಳಿಸಿದ್ದಾನೆ.

"ಈ ಶ್ಲೋಕದ ಒಟ್ಟು ತಾತ್ಪರ್ಯವೇನೆಂದರೆ 'ಸರ್ವಧರ್ಮಗಳನ್ನೂ ಪರಿತ್ಯಜಿಸಿ ನನ್ನೊಬ್ಬನನ್ನೇ ಉಪಾಯವಾಗಿ ಸ್ವೀಕರಿಸು. ನಾನು ನಿನ್ನನ್ನು ಸಮಸ್ತಪಾಪಗಳಿಂದ ಮುಕ್ತನನ್ನಾಗಿ ಮಾಡಿ ರಕ್ಷಿಸುತ್ತೇನೆ. ನೀನು ದುಃಖಿಸಬೇಡ" ಎಂದು ಪರಮಾತ್ಮ ತನ್ನಲ್ಲಿ ಶರಣರಾದವರೆಲ್ಲರಿಗೂ ರಕ್ಷಣೆಯ ಭರವಸೆ ನೀಡಿದ್ದಾನೆ.

**ಚರಮಶ್ಲೋಕ ಪ್ರಕರಣವು ಮುಗಿಯಿತು**

## ತಿರುಮಂತ್ರದ ಸಂಗ್ರಹಾರ್ಥ

"**ಓಂ ನಮಃ ನಾರಾಯಣಾಯ**"—ಇದೇ ತಿರುಮಂತ್ರವು. ಇದರಲ್ಲಿ ಎಂಟು ಅಕ್ಷರಗಳೂ, ಮೂರು ಪದಗಳೂ ಇವೆ.

1. **ಓಂ**—ಎಂಬ ಪ್ರಣವವೇ ಮೊದಲನೆಯ ಪದವು. ಇದರಲ್ಲಿ ಅ, ಉ, ಮ ಎಂದು ಮೂರು ಅಕ್ಷರಗಳು ಸೇರಿವೆ ಮತ್ತು ಅಕಾರದಮೇಲೆ 'ಆಯ' ಎಂಬ ಚತುರ್ಥೀವಿಭಕ್ತಿ ಪ್ರತ್ಯಯವು ಸೇರಿ ಲೋಪ ಹೊಂದಿದೆ.

   ಅ (ಆಯ)+ಉ+ಮ=ಓಂ.

   **ಅ**=ಸರ್ವಕಾರಣನೂ, ಸರ್ವರಕ್ಷಕನೂ, ಸರ್ವಶೇಷಿಯೂ, ಶ್ರೀಯಃಪತಿಯೂ ಆದ ನಾರಾಯಣ.

   (ಆಯ)+ಉ=ನಿಗೇ.

   **ಮ**=ಜ್ಞಾನಸ್ವರೂಪನಾದ, ಚೇತನನಾದ ನಾನು ಅನನ್ಯಾರ್ಹಶೇಷಭೂತನು.

2. **ನಮಃ**—ಎಂಬುದೇ ಈ ಮಂತ್ರದ ಎರಡನೆಯ ಪದವು. ಇದಕ್ಕೆ 'ನ, ಮಃ' ಎಂದು ಎರಡು ಪದಗಳಾಗಿಯೂ, 'ನಮಃ' ಎಂದು ಒಂದೇ ಪದವಾಗಿಯೂ ಅರ್ಥ ಹೇಳಲ್ಪಟ್ಟಿದೆ.

   (i) **ನ, ಮಃ**—(ಮಃ ನ) ನನಗೆ ನಾನು ಸ್ವತಂತ್ರನಲ್ಲವು; ನನಗೆ ನಾನು ರಕ್ಷಕನಲ್ಲವು.

   (ii) **ನಮಃ**—ನನಗೆ ರಕ್ಷಕನಾದ ಸ್ವಾಮಿಯಾದ ನಾರಾಯಣನಿಗೆ ನಮಸ್ಕರಿಸುವುದೇ ನನ್ನ ಸ್ವರೂಪವೂ, ನನಗೆ ಉಪಾಯವೂ ಮತ್ತು ಪರಮಪುರುಷಾರ್ಥವೂ ಆಗಿದೆ.

3. **ನಾರಾಯಣಾಯ**—ಎಂಬುದೇ ಈ ಮಂತ್ರದ ಮೂರನೆಯ ಪದವು. ಸಮಸ್ತ ಚೇತನಾಚೇತನ ವಸ್ತುಗಳಿಗೆ ಆಶ್ರಯನಾದ ಮತ್ತು ಅವುಗಳಲ್ಲಿ ಅಂತರ್ಯಾಮಿಯಾಗಿದ್ದುಕೊಂಡು ಅವುಗಳನ್ನು ರಕ್ಷಿಸುತ್ತಿರುವ ಶ್ರೀಮನ್ನಾರಾಯಣನಿಗೆ ನಾನು ಸರ್ವದೇಶ, ಸರ್ವಕಾಲ, ಸರ್ವಾವಸ್ಥೆಗಳಲ್ಲೂ

ಸ್ವಾರ್ಥರಹಿತನಾಗಿ, ಪರಮಾತ್ಮನ ಸಂತೋಷಕ್ಕಾಗಿಯೇ ಸರ್ವವಿಧ ಕೈಂಕರ್ಯಗಳನ್ನೂ ಪ್ರೀತಿಯಿಂದಲೂ ಭಕ್ತಿಯಿಂದಲೂ ಮಾಡುವಂತೆ ಆಗಲಿ ಎಂದು ಪ್ರಾರ್ಥಿಸತ್ತೇನೆ ಎಂಬ ಪ್ರಾರ್ಥನೆಯು ಈ ಮಂತ್ರದಲ್ಲಿ ತಿಳಿಸಲ್ಪಟ್ಟಿದೆ.

ಇದರ ಒಟ್ಟು ತಾತ್ಪರ್ಯವೇನೆಂದರೆ:—

ಸ್ವಾಮಿಯಾದ ಪರಮಾತ್ಮನಿಗೇ ಶೇಷಭೂತನಾದ ನಾನು, ನನಗೆ ನಾನು ಸ್ವತಂತ್ರನಾಗಿರದೆ ಭಗವದತ್ಯಂತ ಪರತಂತ್ರನಾಗಿರಬೇಕು ಮತ್ತು ಸರ್ವಶೇಷಿಯಾದ ಪರಮಾತ್ಮನಿಗೇ ಸಮಸ್ತಕೈಂಕರ್ಯಗಳನ್ನೂ ಸ್ವಾರ್ಥರಹಿತನಾಗಿ ಮಾಡುವಂತಹವನಾಗಬೇಕು ಎಂದು ಪರಮಾತ್ಮನನ್ನೇ ನಮಸ್ಕರಿಸಿ ಪ್ರಾರ್ಥಿಸುತ್ತೇನೆ—ಎಂಬುದೇ ಈ ಮಂತ್ರದಲ್ಲಿ ಪ್ರತಿಪಾದಿಸಿರುವ ಪ್ರಾರ್ಥನೆಯ ಸಾರಾಂಶವು.

**ಮುಮುಕ್ಷುಪ್ಪಡಿ ಸಮಾಪ್ತವಾಯಿತು**

**ಶ್ರೀ ಪಿಳ್ಳೈಲೋಕಾಚಾರ್ಯರ್ ತಿರುವಡಿಗಳೇ ಶರಣಂ**

---

“ಅಹಲಹಿಲ್ಲೇನ್ ಇರೈಯುಮೆನ್ರು ಅಲರ್ಮೇಲ್ಮಂಗೈ
ಉರೈಮಾರ್ಬಾ!
ನಿಹರಿಲ್ ಪುಹಳಾಯ್ ಉಲಹಮೂನ್ರುಡೈಯಾಯ್
ಎನ್ನೈಯಾಳ್ವಾನೇ!
ನಿಹರಿಲ್ ಅಮರರ್ ಮುನಿಕ್ಕಣಂಗಳ್ ವಿರುಂಬುಂ
ತಿರುವೇಂಗಡತ್ತಾನೇ!
ಪುಹಲೊನ್ರಿಲ್ಲಾ ಅಡಿಯೇನ್ ಉನ್ನಡಿಕ್ಕೀಳ್
ಅಮರ್ನ್ದು ಪುಹುನ್ದೇನೇ”॥

(ಶ್ರೀ ನಮ್ಮಾಳ್ವಾರ್ರವರ ಶರಣಾಗತಿ ಪಾಶುರ—ತಿರವಾಯ್ಮೊಳಿ 6–10–9)

“ನ ಧರ್ಮನಿಷ್ಠೋಽಸ್ಮಿ ನ ಚಾತ್ಮವೇದೀ
ನ ಭಕ್ತಿಮಾಂ ಸ್ತ್ವಚ್ಚರಣಾರವಿಂದೇ
ಅಕಿಂಚನೋಽನನ್ಯಗತಿಶ್ಶರಣ್ಯ
ತ್ವತ್ಪಾದಮೂಲಂ ಶರಣಂ ಪ್ರಪದ್ಯೇ”

(ಶ್ರೀ ಯಾಮುನಾಚಾರ್ಯರ ಶರಣಾಗತಿ ಸ್ತೋತ್ರರತ್ನ, ಶ್ಲೋಕ–22)

ಶ್ರೀಕೃಷ್ಣಾರ್ಪಣಮಸ್ತು।